ಡಾ. ಬ್ರಹ್ಮರ್ಷಿ ಪಿತಾಮಹ ಸುಭಾಷ್ ಪತ್ರೀಜಿ ಆಶೀರ್ವಾದಗಳೊಂದಿಗೆ

# ಚಕ್ರಗಳು

ತಟವರ್ತಿ ವೀರರಾಘವರಾವ್

ಅನುವಾದ : ಉಮಾ ಲೋಕೇಶ್



# ಚಕ್ರಗಳು

ಮೂಲ : ತಟವರ್ತಿ ವೀರರಾಘವರಾವು

ಕನ್ನಡ ಅನುವಾದ : ಉಮಾ ಲೋಕೇಶ್

**ಶ್ರೀರಾಮ ಪಬ್ಲಿಕೇಶನ್ಸ್**
ಶ್ರೀ ರಾಮಧಾಮ ಪಿರಮಿಡ್ ಧ್ಯಾನಕೇಂದ್ರ,
ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್, ಬೆಂಗಳೂರು – 560 066

---

**ಪಿರಮಿಡ್ ವ್ಯಾಲಿ ಇಂಟರ್‌ನ್ಯಾಷನಲ್**
ಕೆಬ್ಬೆದೊಡ್ಡಿ ಗ್ರಾಮ, ಹಾರೋಹಳ್ಳಿ ಹೋಬಳಿ, ಕನಕಪುರ ರಸ್ತೆ, ಬೆಂಗಳೂರು

**CHAKRAGALU**

Edited & Published by **Srirama Publications,** Sri Ramadhama Pyaramid Dyanakendra, Narayanappa Garden, Whitefiled, Bangalore - 560 066.
**M.: 9449695503, 8050082689, 9886532204**

| | | |
|---|---|---|
| ಮೊದಲನೇ ಮುದ್ರಣ | : | 2023 |
| ಹಕ್ಕುಗಳು | : | ಪ್ರಕಾಶಕರು |
| ಪ್ರಕಾಶಕರು | : | **ಶ್ರೀರಾಮ ಪಬ್ಲಿಕೇಶನ್ಸ್**<br>ಶ್ರೀ ರಾಮಧಾಮ ಪಿರಮಿಡ್ ಧ್ಯಾನಕೇಂದ್ರ,<br>ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್,<br>ಬೆಂಗಳೂರು – 560 066<br>ಮೊ.: 9449695503, 9886532204 |
| ಬಳಸಿದ ಕಾಗದ | : | 70 ಜಿ.ಎಸ್.ಎಂ. ಮ್ಯಾಪಲಿಥೊ ಡೆಮಿ 1/8 |
| ಪ್ರತಿಗಳು | : | 1000 |
| ಬೆಲೆ | : | |
| ಪುಟಗಳು | : | v+28=32 |
| ಮುಖಪುಟ | : | ಚಂದ್ರಕಾಂತ ಪಟ್ಟಣ |
| ಅಕ್ಷರ ಜೋಡಣೆ | : | **ನಿರಂತರ ಸಾಯಿ ಕಮ್ಯೂನಿಕೇಷನ್ ಪ್ರೈ .ಲಿ**<br>ಮೊ: 96328 12541 |

ಮುದ್ರಣ :

**ಪೂರ್ಣಾ ಗ್ರಾಫಿಕ್ಸ್,**

ಬೆಂಗಳೂರು 9844167475

# ಸ್ವ-ಪರಿಚಯ

ನನ್ನ ಹೆಸರು ಎಚ್.ಎನ್.ಶ್ರೀನಿವಾಸ. ವೃತ್ತಿಯಲ್ಲಿ ಸಿವಿಲ್ ಇಂಜಿನಿಯರ್. ಪದವಿ ಪಡೆದ ಆರಂಭದಲ್ಲಿ, ಮೂರು ವರ್ಷಗಳ ಕಾಲ ಸರ್ಕಾರಿ ಉದ್ಯೋಗದಲ್ಲಿ ಕೆಲಸ ಮಾಡಿದ ನಂತರ, ಆ ಉದ್ಯೋಗದಲ್ಲಿ ನಿರಾಸಕ್ತಿ ಹೊಂದಿದ ನಾನು, 1990ರಲ್ಲಿ ನನ್ನ ಸ್ವಂತ ವ್ಯವಹಾರವನ್ನು ಪ್ರಾರಂಭಿಸಿದೆ. ನನ್ನ ಆಧ್ಯಾತ್ಮಿಕ ಪ್ರಯಾಣವು 1999ರಲ್ಲಿ ಎಸ್.ಎಸ್.ವೈ. ಅಂದರೆ, ಸಿದ್ಧಸಮಾಧಿ ಯೋಗ ಗುರೂಜಿಯವರಿಂದ ಪ್ರಾರಂಭವಾಯಿತು. 2004ರಲ್ಲಿ ವೀರಾಂಜನೇಯ ದೇವಾಲಯವನ್ನು ಬೆಂಗಳೂರಿನ ವೈಟ್‌ಫೀಲ್ಡ್‌ನಲ್ಲಿ ನಿರ್ಮಿಸಲಾಯಿತು. ಎಲ್ಲಾ ಆಚರಣೆಗಳು ದೇವಾಲಯದಲ್ಲಿ ನಿಯಮಿತವಾಗಿ ನಡೆಯುತ್ತಿದ್ದವು. ಆಧ್ಯಾತ್ಮದ ಬಗ್ಗೆ ನನಗೆ ಒಲವು ಹೆಚ್ಚಾದಂತೆ ನಾನು ಮತ್ತು ನನ್ನ ಪತ್ನಿ ಎಸ್.ಎನ್.ವಿಜಯಲಕ್ಷ್ಮಿ ಸೇರಿ 2008ರಲ್ಲಿ ನಾವು ದೇವಾಲಯದ ಪಕ್ಕದಲ್ಲಿ 'ಶ್ರೀ ರಾಮಧಾಮ ಧ್ಯಾನ ಮಂದಿರ' ಎಂಬ ಹೆಸರಿನ ಒಂದು ಧ್ಯಾನ ಮಂದಿರವನ್ನು ನಿರ್ಮಿಸಿದೆವು. ಇದನ್ನು ಸಿದ್ಧಸಮಾಧಿ ಯೋಗ ಸಂಸ್ಥಾಪಕರಾದ ಡಾ.ಋಷಿ ಪ್ರಭಾಕರ್ ಗುರೂಜಿಯವರು ಉದ್ಘಾಟಿಸಿದರು. ಅಲ್ಲಿ ಎಸ್.ಎಸ್.ವೈ. ಶಿಕ್ಷಕರಿಂದ ಸಾಮೂಹಿಕ ಧ್ಯಾನ ತರಬೇತಿಗಳನ್ನು ಆಯೋಜಿಸುತ್ತಿದ್ದೆವು. 2009ರಲ್ಲಿ ಬ್ರಹ್ಮರ್ಷಿ ಪಿತಾಮಹ ಡಾ.ಸುಭಾಷ್ ಪತ್ರೀಜಿಯವರು ಧ್ಯಾನ ಅಧಿವೇಶನಕ್ಕಾಗಿ ಶ್ರೀರಾಮಧಾಮ ಕೇಂದ್ರಕ್ಕೆ ಭೇಟಿ ನೀಡಿದಾಗ 'ಆನಾಪಾನಸತಿ ಧ್ಯಾನ ವಿಧಾನ'ವನ್ನು ಪರಿಚಯ ಮಾಡಿಸಿದರು. ಪತ್ರೀಜಿಯವರನ್ನು ಭೇಟಿಯಾದ ನಂತರ, ದಿನನಿತ್ಯದ ನನ್ನ ಆಧ್ಯಾತ್ಮಿಕ ಅಭ್ಯಾಸದ ಕಾಲಾವಧಿಯನ್ನು ಹೆಚ್ಚಿಸಿದೆ. ಪಿ.ಎಸ್.ಎಸ್.ಎಂ.ನ ತತ್ವಸಿದ್ಧಾಂತದಲ್ಲಿ ಗುರು–ಶಿಷ್ಯರ ಕುರಿತಾದ ಒಂದು ಪ್ರಮುಖವಾದ ಅಂಶವು ನನ್ನ ಗಮನ ಸೆಳೆಯಿತು. 'ಯಾರೂ ಶಾಶ್ವತವಾಗಿ ಗುರುಗಳಲ್ಲ, ಯಾರೂ ಶಾಶ್ವತವಾಗಿ ಶಿಷ್ಯರೂ ಅಲ್ಲ, ಅವರಿಗೆ ಅವರೇ ಗುರುಗಳು. ಮಾಸ್ಟರ್ ಆಗಿ ಬದುಕಲು ಕಲಿಯಿರಿ, ಎಂದಿಗೂ ಶಿಷ್ಯರಾಗಿಯೇ ಇರಬೇಡಿ' ಎಂಬ ಪತ್ರೀಜಿಯವರ ಮಾತುಗಳು ಆಧ್ಯಾತ್ಮದಲ್ಲಿ ನನ್ನ ಆಸಕ್ತಿಯನ್ನು ಹೆಚ್ಚಿಸಿತು. 2013ರಲ್ಲಿ ಪತ್ರೀಜಿಯವರು ನನಗೆ ಪಿರಮಿಡ್ ವ್ಯಾಲಿ ಇಂಟರ್‌ನ್ಯಾಷನಲ್ ಟ್ರಸ್ಟ್‌ನಲ್ಲಿ ಒಬ್ಬ ಟ್ರಸ್ಟಿಯಾಗಿ ಸೇವೆ ಮಾಡುವ ಸದವಕಾಶವನ್ನು ಒದಗಿಸಿದರು.

ಇದರಲ್ಲಿ ನನಗೆ 'ನಿತ್ಯಅನ್ನದಾನ ಸೇವೆ'ಯ ಜವಾಬ್ದಾರಿಯನ್ನು ವಹಿಸಲಾಯಿತು.

ಪ್ರತಿಯೊಬ್ಬ ಮಾನವನು ಮಾಧವನಾಗಬೇಕಾದರೆ ಪ್ರತಿನಿತ್ಯವೂ ಶ್ರದ್ಧೆ, ಆಸಕ್ತಿಯಿಂದ ಧ್ಯಾನಾಭ್ಯಾಸ ಮಾಡಬೇಕು. ಅದರ ಜೊತೆಯಲ್ಲಿ 'ಸಸ್ಯಾಹಾರ', 'ಸ್ವಾಧ್ಯಾಯ', 'ಸಜ್ಜನ–ಸಾಂಗತ್ಯ, ಅಂದರೆ, ಸತ್ಸಂಗ' ಹಾಗೂ 'ಪಿರಮಿಡ್ ಶಕ್ತಿ ಬಳಕೆ' ಅವಶ್ಯಕ ಎಂದು ಆಧ್ಯಾತ್ಮಶಾಸ್ತ್ರ ತಿಳಿಸುತ್ತದೆ. ನಿರಂತರ, ಸಾಧನೆಯಿಂದ ಶಾರೀರಿಕ ಆರೋಗ್ಯ, ಮಾನಸಿಕ ಪ್ರಶಾಂತತೆ, ಬುದ್ಧಿ–ವಿಕಾಸ, ಆನಂದದ ಜೀವನ, ಆತ್ಮಜ್ಞಾನ ಮುಂತಾದವುಗಳು ಲಭಿಸುವುದು. ಹೊಸ ಯುಗದ ಆಧ್ಯಾತ್ಮ ಸಾಹಿತ್ಯವನ್ನು ಸ್ವಾಧ್ಯಾಯಕ್ಕಾಗಿ ಪ್ರಕಟಿಸುವ ಹಿನ್ನೆಲೆಯಲ್ಲಿ 'ಶ್ರೀರಾಮ ಪಬ್ಲಿಕೇಶನ್ಸ್' ಹೆಸರಿನ ಪುಟ್ಟ ಪ್ರಕಾಶನ ಸಂಸ್ಥೆಯನ್ನು ಆರಂಭಿಸಲಾಯಿತು. ಪತ್ರೀಜಿಯವರ ಮತ್ತು ತಟವರ್ತಿ ವೀರರಾಘವರಾವ್ ರವರ ಆದೇಶದ ಮೇರೆಗೆ ನಮ್ಮ ಪ್ರಕಾಶನದ ವತಿಯಿಂದ ಕೆಲವು ಆಧ್ಯಾತ್ಮಿಕ ಪುಸ್ತಕಗಳನ್ನು ಪ್ರಕಟಿಸಲಾರಂಭಿಸಿದೆವು. ಕೆಲವು ಪುಸ್ತಕಗಳನ್ನು ಕನ್ನಡಕ್ಕೆ ಅನುವಾದಿಸಿ ಮುದ್ರಿಸಲಾಯಿತು. ಕೆಲವು ತೆಲುಗು ಪುಸ್ತಕಗಳನ್ನು ಮರುಮುದ್ರಣ ಮಾಡಲಾಯಿತು. ತೆಲುಗಿನ ಉತ್ತಮ ಪುಸ್ತಕಗಳು ಕನ್ನಡದ ಆಧ್ಯಾತ್ಮ ಸಾಧಕರಿಗೂ ದೊರಕಲೆಂದು ನಾವು ಇಂತಹ ಪ್ರಯತ್ನ ಮಾಡಿದ್ದೇವೆ.

ತಮ್ಮ ವಿಶ್ವಾಸಿಗಳು,

**ಎಚ್.ಎನ್.ಶ್ರೀನಿವಾಸ**
ಮತ್ತು
**ಎಸ್.ಎನ್.ವಿಜಯಲಕ್ಷ್ಮಿ**
**ಸಂಸ್ಥಾಪಕರು,**
ಶ್ರೀರಾಮಧಾಮ ಧ್ಯಾನಕೇಂದ್ರ

# ಚಕ್ರಗಳು

ಲೋಕದಲ್ಲಿ ತುಂಬಾ ಜನರು ಚಕ್ರಗಳ ಕುರಿತು ಹೇಳುತ್ತಿರುತ್ತಾರೆ. ಚಕ್ರಗಳನ್ನು ಆಕ್ಟಿವೇಟ್ ಮಾಡಿಕೊಳ್ಳಬೇಕು ಎಂದುಕೊಳ್ಳುತ್ತಾರೆ. ನಮ್ಮ ಸೊಸೈಟಿಯಲ್ಲಿ ಕೂಡಾ ಕೆಲವರು ಚಕ್ರ ಧ್ಯಾನಗಳನ್ನು ಮಾಡಿಸುತ್ತಿದ್ದಾರೆ. ಧ್ಯಾನಿಗಳು ಕೂಡಾ ಅದಕ್ಕಾಗಿಯೇ ಓಡುತ್ತಿದ್ದಾರೆ.

ಹೌದು...ಹಾಗಾದರೆ, ಈ ಚಕ್ರ ಧ್ಯಾನ ಎಂದರೇನು? ಚಕ್ರಗಳು ಎಷ್ಟಿವೆ? ಯಾವ ಚಕ್ರಸ್ಥಿತಿಯಲ್ಲಿ ಇರುವವರ ಪ್ರವರ್ತನೆ ಹೇಗಿರುತ್ತದೆ? ಚಕ್ರಗಳು ಹೇಗೆ ಉತ್ತೇಜನವಾಗುತ್ತದೆ? ಅಷ್ಟೇ ಅಲ್ಲ ಮರಣಿಸಿದ ನಂತರ ಯಾವ ಚಕ್ರಸ್ಥಿತಿಯಲ್ಲಿ ಇರುವವರುಯಾವ ಲೋಕಗಳಿಗೆ ಸೇರಿಕೊಳ್ಳುತ್ತಾರೆ? ಎನ್ನುವ ವಿಷಯಗಳನ್ನು ತಿಳಿದುಕೊಳ್ಳೋಣ. ಮುಖ್ಯವಾಗಿ ಚಕ್ರಗಳು 6 ಎಂದು ಹೇಳುತ್ತಾರೆ.

**7ನೇಯದು ಸಹಸ್ರಾರ ಸ್ಥಿತಿ ಎನ್ನುತ್ತಾರೆ. ಚಕ್ರಗಳು ಯಾವುದೆಂದರೆ...**

1) ಮೂಲಧಾರ

2) ಸ್ವಾಧಿಸ್ಟಾನ

3) ಮಣಿಪೂರಕ

4) ಅನಾಹತ



5) ವಿಶುದ್ಧ

6) ಆಜ್ಞಾ

7) ಮತ್ತು ಸಹಸ್ರಾರ ಸ್ಥಿತಿ.

ಮತ್ತೊಂದು ವಿಷಯ ಏನೆಂದರೆ ಚಕ್ರಗಳು ಅಂದರೆ ತುಂಬಾ ಜನ ಏನಂದುಕೊಳ್ಳುತ್ತಾರೆ, ಎಂದರೆ ಏನೇನೋ ಚಕ್ರಗಳು ಇರುತ್ತವೆ ಎಂದುಕೊಳ್ಳುತ್ತಾರೆ. ಚಕ್ರಗಳು ಅಂದರೆ ಪತ್ರೀಜಿಯವರು ನಮಗೆ ಏನು ಹೇಳಿದ್ದಾರೆಂದರೆ, ನಾಡಿಮಂಡಲ ಕೊಡುವಿಕೆ ಎಂದು, ನಮ್ಮ ಶರೀರವೆಲ್ಲ ಎರಡು ಲಕ್ಷ ನಾಡಿಗಳು ಇವೆಯೆಂದು ಅವು ಕಣ್ಣಿಗೆ ಕಾಣಿಸುವುದಿಲ್ಲ ಅವುಗಳಲ್ಲಿ 72,000 ನಾಡಿಗಳು ತುಂಬಾ ಮುಖ್ಯವಾದದ್ದು ಎಂದು ಹೇಳಿದ್ದಾರೆ ಅವು ಈ ಶರೀರವೆಲ್ಲ ಇರುತ್ತವೆ. ಎಷ್ಟೋ ರೋಡುಗಳು ಸೇರಿದರೆ ರೋಡುಗಳ ಕೂಡುವಿಕೆ ಎನ್ನುತ್ತಾರೆ ಹಾಗೆಯೇ ನಾಡಿಗಳು, ಅತ್ತ ಇತ್ತ ಹಣೆದುಕೊಂಡು ಎಲ್ಲಾ ನಾಡಿಗಳು ಸೇರಿದ ಜಾಗವನ್ನು ನಾಳೆ ನಾಡಿಮಂಡಲ ಮಂಡಲ ಕೂಡುವಿಕೆ ಎನ್ನುತ್ತಾರೆ. ಅವುಗಳನ್ನೇ ಚಕ್ರಗಳು ಎಂದು ಹೇಳುತ್ತಾರೆ. ಕೂಡುವಿಕೆ ಎಂದರೆ ಜಂಕ್ಷನ್ ಎಂದು ನಾವು ತಿಳಿದುಕೊಳ್ಳಬೇಕು.

ಆದರೆ ಈ ಚಕ್ರಗಳು ಎಂದ ಕೂಡಲೇ ಅಲ್ಲಿ ಯಾವ ಚಕ್ರಗಳು ಇರುತ್ತವೆ ಎಂದು ಇಲ್ಲದಿದ್ದರೆ, ಏನೋ ಬೀಜಾಕ್ಷರಗಳು ಇರುತ್ತವೆ ಎಂದು, ಏನೋ ಚಿತ್ರಗಳು ಅಥವಾ ಇನ್ನೇನೋ ಇರುತ್ತದೆ ಎಂದುಕೊಳ್ಳುತ್ತಾರೆ. ಆದರೆ ಅದೇನು ಇರುವುದಿಲ್ಲ. ಹಾಗಾದರೆ ಏಕೆ ಈ ಚಕ್ರಗಳ ಕುರಿತು ಹೇಳುತ್ತಿರುತ್ತಾರೆ.. ಅಷ್ಟೇ ಅಲ್ಲ ನಮಗೆ ಚಕ್ರ ಧ್ಯಾನಗಳು ಮಾಡಿಸುವವರು ಇದ್ದಾರೆ. ಅವರು ಹೇಳುವುದು ಏನೆಂದರೆ, ಚಕ್ರಧ್ಯಾನದಲ್ಲಿ ಪಾಲ್ಗೊಂಡರೆ, ನಿಮ್ಮ ಚಕ್ರಗಳು ಉತ್ತೇಜತವಾಗುತ್ತದೆ. ನಿಮ್ಮ ಕುಂಡಲಿನಿ ಶಕ್ತಿ ಹೆಚ್ಚುತ್ತದೆ. ಅದು ಊರ್ಧ್ವ ಮುಖವಾಗಿ ಪಯಣಿಸಿ ಇಂತಹ ಚಕ್ರವನ್ನು ಉತ್ತೇಜಸುತ್ತದೆ ಎನ್ನುತ್ತಾರೆ.

ಅಷ್ಟೇ ಅಲ್ಲ ಮಣಿಪೂರಕ ಚಕ್ರವಾಗಲಿ, ಅನಾಹತ ಚಕ್ರವಾಗಲಿ, ವಿಶುದ್ಧ ಚಕ್ರವಾಗಲಿ,ಆಜ್ಞಾ ಚಕ್ರವಾಗಲಿ, ಸಹಸ್ರಾರ ಕೂಡಾ ನಿಮಗೆ ಉತ್ತೇಜಿತವಾಗುತ್ತದೆ ಎಂದು ಹೇಳುತ್ತಾರೆ. ಅದಕ್ಕಾಗಿ ಆಸೆಯಿಂದ ಆ ಕ್ಲಾಸಿಗೆ ಹೋದರೇನೇ ನಮ್ಮಲ್ಲಿ ಬದಲಾವಣೆ ಬರುತ್ತದೆ ಎಂದು ಭಾವಿಸುತ್ತಾ ಇರುತ್ತಾರೆ.

ಆದರೆ ನೆನಪಿಟ್ಟುಕೊಳ್ಳಿ ಅವು ಚಕ್ರಗಳು ಅಲ್ಲ, ಚಕ್ರ ಸ್ಥಿತಿಗಳು. ಅಂದರೆ ಆಧ್ಯಾತ್ಮಿಕ ಮಾರ್ಗದಲ್ಲಿ ಅಂದರೆ ಧ್ಯಾನ ಜ್ಞಾನ ಮಾರ್ಗದಲ್ಲಿ ಪ್ರವೇಶಿಸಿದವರು ಅಧ್ಯಾತ್ಮಿಕವಾಗಿ, ಆತ್ಮಪರವಾಗಿ ಅಭಿವೃದ್ಧಿ ಹೊಂದುತ್ತಾರೆ. ಹೇಗೆಂದರೆ, ಈಗ ನಾವು ಧ್ಯಾನ

ಮಾಡುತ್ತಿದ್ದೇವೆ, ಪುಸ್ತಕಗಳು ಓದುತ್ತಿದ್ದೇವೆ, ಸಾಂಗತ್ಯ ಮಾಡುತ್ತಿದ್ದೇವೆ, ಸೇವೆಗಳು ಮಾಡುತ್ತಿದ್ದೇವೆ, ಹಾಗೇ ಮಾಡುವವರು ನಿಜವಾಗಿಯೂ ಜ್ಞಾನ ಸಂಪಾದಿಸಿಕೊಳ್ಳುತ್ತಾರೆ ಅಭಿವೃದ್ಧಿ ಹೊಂದುತ್ತಾರೆ. ನೆನಪಿರಲಿ ಪ್ರತಿ ಮಾನವನ ಅಭಿವೃದ್ಧಿಯ ಅನುಗುಣವಾಗಿ ಇವನು ಈ ಚಕ್ರದ ಸ್ಥಿತಿಯಲ್ಲಿ ಇದ್ದಾನೆ ಇಂತಹ ಅವನು ಆ ಚಕ್ರ ಸ್ಥಿತಿಯಲ್ಲಿ ಇದ್ದಾನೆ ಎಂದು ಹೇಳುತ್ತಾ ಇರುತ್ತಾರೆ, ಅಷ್ಟೇ ಹೊರತು ಯಾವುದೋ ಒಂದು ದಿನ ಧ್ಯಾನ ಮಾಡಿದ ತಕ್ಷಣ ಚಕ್ರಗಳು ಆಕ್ಟಿವ್ ಆಗುವುದಿಲ್ಲ ಅವರು ಅದನ್ನು ಹೇಳುತ್ತಾ ಇದ್ದರೆ ಇವರು ಹಾಗೆ ಫೀಲ್ ಆಗುತ್ತಾ ಇರುತ್ತಾರೆ...ಹಾಗೆ ನಡೆದಂತೆ ಭಾವಿಸುತ್ತಾರೆ ಅಷ್ಟೇ.

ಪತ್ರೀಜಿ ಏನು ಹೇಳಿದ್ದಾರೆ ಎಂದರೆ, ನಿರಂತರ ಧ್ಯಾನ ಸಾಧನೆಯಿಂದ ನಾಡಿಮಂಡಲ ಪ್ರಕ್ಷಾಳನೆ ನಡೆದು ನಮಗೆ ಶಕ್ತಿಗಳು, ಸಿದ್ದಿಗಳು, ಸಿದ್ಧಿಸುತ್ತದೆ ನಿಜಕ್ಕೂ ಮೂಲಾಧಾರ ಸ್ವಾದಿಷ್ಟಾನ, ಮಣಿಪೂರಕ, ಅನಾಹತ, ವಿಶುದ್ಧ, ಆಜ್ಞಾ ಎನ್ನುವ ಪದಗಳು ಮನುಷ್ಯನ ವಿವಿಧ ಮನೋಸ್ಥಾಯಿಗಳನ್ನು ಸೂಚಿಸುತ್ತದೆ ಹೊರತು ಅದಕ್ಕಿಂತ ಮಿಗಿಲಾದದ್ದು ಏನು ಇಲ್ಲ. ಧ್ಯಾನ ಸಾಧನೆ ಮಾಡುತ್ತಾ ಆಲೋಚನಾ ರಹಿತ ಸ್ಥಿತಿಗೆ ಸೇರುತ್ತಾ ಇದ್ದರೆ, ಅಪಾರವಾದ ವಿಶ್ವ ಶಕ್ತಿ ಪ್ರವೇಶಿಸಿ ನಮ್ಮ ಪೂರ್ವ ಪಾಪ ಕರ್ಮಗಳ ಪ್ರತಿರೂಪವಾದ ಮಲಿನ ನಾಡಿ ಮಂಡಲಗಳನ್ನು ಶುದ್ಧಿ ಮಾಡುತ್ತದೆ ಈ ಪ್ರಕ್ಷಾಳನೆಯನ್ನೇ ಆರಂಭಿಕ ಧ್ಯಾನ ಅಭ್ಯಾಸಕರು ಕುಂಡಲಿನಿ ಉತ್ತೇಜನ ಆಗಿದೆ ಎನ್ನುತ್ತಾರೆ ಎಂದು ಪತ್ರೀಜಿ ಹೇಳುತ್ತಾರೆ.

ಇನ್ನು ಕೆಲವರು ನನ್ನಲ್ಲಿ ಕುಂಡಲಿನಿ ಮೇಲಕ್ಕೆ ಏಳುತ್ತಿರುವಂತೆ ನನಗೆ ಅನಿಸುತ್ತದೆ ಎಂದು ಹೇಳುತ್ತಾರೆ.ಆಗ ಆ ಮಾಸ್ಟರ್ ನಿನಗೆ ಸಹಸ್ರಾರ ಆಕ್ಟಿವೇಟ್ ಆಗಿದೆ ಎಂದು ಹೇಳುತ್ತಾನೆ. ಅವರು ಅದಕ್ಕಿಂತ ಬೇರೇನೂ ಆಲೋಚಿಸುವುದಿಲ್ಲ.

ಆದರೆ ನಿಜವಾಗಿ ಸಹಸ್ರಾರ ಆಕ್ಟಿವೇಟ್ ಆದರೆ ಇವರು ಸಹಸ್ರಾರ ಸ್ಥಿತಿಗೆ ಸೇರಿಕೊಂಡರೆ ಇವರ ಪ್ರವರ್ತನೆ ಹೇಗಿರಬೇಕು ಸ್ಥಿತಿ ಹೇಗಿರಬೇಕು ಅದು ಯಾವುದನ್ನು ನೋಡುವುದಿಲ್ಲ....ಆದರೆ ಧ್ಯಾನ ಮಾಡುವುದರಿಂದ ನಿಧಾನವಾಗಿ ಪ್ರವರ್ತನೆಯಲ್ಲಿ ಬದಲಾವಣೆ ಬರುತ್ತದೆ, ಜ್ಞಾನದಲ್ಲಿ ಬದಲಾವಣೆ ಬರುತ್ತದೆ ಹಾಗೆ ಬದಲಾವಣೆ ಬರುತ್ತಾ ಅವರ ಪ್ರವರ್ತನೆ ಯಾವ ಚಕ್ರಸ್ಥಿತಿಗೆ ತಕ್ಕಂತೆ ಇದ್ದರೆ ಅವರು ಆ ಚಕ್ರಸ್ಥಾಯಿಗೆ ಸೇರಿಕೊಂಡಂತೆ ಲೆಕ್ಕ.

ನಾವು ನಾಲ್ಕು ವಿಧವಾದ ಗುಣಗಳ ಕುರಿತು ಹೇಳಿಕೊಂಡಿದ್ದೇವೆ ಅವು ತಮೋಗುಣ, ರಜೋಗುಣ, ಸಾತ್ವಿಕ ಗುಣ, ನಿರ್ಗುಣ ಈಗ ಯಾರು ಯಾವ ಗುಣದಲ್ಲಿ ಇರುತ್ತಾರೆ ಎನ್ನುವುದನ್ನು ನಾವು ತಿಳಿದುಕೊಳ್ಳೋಣ. ಅಂದರೆ ಯಾವಾಗಲೂ

ಸೋಮಾರಿತನದಲ್ಲಿರುವವನು, ಊಟಕ್ಕೆ ಪ್ರಾಮುಖ್ಯತೆ ಕೊಡುವವನು ಯಾವ ಕೆಲಸವನ್ನು ಮಾಡದವನು ತಮೋಗುಣ ಲಕ್ಷಣದಲ್ಲಿ

ಇರುವಂತೆ. ಹಾಗೆಯೇ ಯಾರು ಅಹಂಕಾರದಿಂದ ಗರ್ವದಿಂದ ನಾನು ಎಂದು ವಿಜೃಂಭಿಸುತ್ತಿದ್ದರೆ ಅವನು ರಜೋಗುಣದಲ್ಲಿ ಇರುವವನು ಎಂದು ಹೇಳುತ್ತೇವೆ...ಯಾರು ಸೇವೆಗಳನ್ನು ಮಾಡುತ್ತಾ ಇರುತ್ತಾರೋ ಅವರು ಸಾತ್ವಿಕ ಗುಣದಲ್ಲಿ ಇರುತ್ತಾರೆ ಎಂದು ಹೇಳುತ್ತೇವೆ ಅಂದರೆ ಅವನ ಕೆಲಸಗಳನ್ನು ಅನುಸರಿಸಿ ಯಾವ ಗುಣದಲ್ಲಿ ಇದ್ದನು ಎಂದು ಹೇಳಬಹುದು.

ಹಾಗೆಯೇ ಅವರ ಕೆಲಸಗಳನ್ನು ಅನುಸಾರವಾಗಿ ಇವನು ಈ ಚಕ್ರ ಸ್ಥಿತಿಯಲ್ಲಿ ಇದ್ದಾನೆ ಎಂದು ಹೇಳುತ್ತಾರೆ ಹೀಗೆ ಒಂದೊಂದು ಗುರು ಅವರ ಸ್ಥಿತಿಯನ್ನು ಚಕ್ರಗಳಲ್ಲಿ ಹೇಳಿದರೆ ಇನ್ನೊಬ್ಬ ಗುರು ಗುಣದಲ್ಲಿ ಹೇಳುತ್ತಾರೆ.

ಈಗ ಹೊಸದಾಗಿ ಡಿ.ಎನ್.ಎ ಆಕ್ಟಿವೇಶನ್ ಕ್ಲಾಸ್ ಎಂದು ಹೇಳುತ್ತಾರೆ ನಿಜವಾಗಿಯೂ ಡಿ ಎನ್.ಎ ಎಂದರೇನು? ಎಂದು ಸರಿಯಾದ ಅರ್ಥ ಯಾರಿಗೂ ತಿಳಿದಿಲ್ಲ ಅವರು ಯಾವುದೋ ಕ್ಲಾಸ್ ಮಾಡುವುದು ಇವರು ಅವಸರವಾಗಿ ಅಲ್ಲಿಗೆ ಧಾವಿಸುವುದರ ಹೊರತು ಮತ್ತೇನು ಇರುವುದಿಲ್ಲ. ಅವರು ಹೇಳುವುದು ಏನೆಂದರೆ ನಮ್ಮ ಕ್ಲಾಸಿಗೆ ಬಂದರೆ ನೀನು ಮೂರನೇ ಡೈಮೆನ್ಷನ್ ನಿಂದ 12ನೇ ಡೈಮನ್ಷನ್ ಗೆ ಹೋಗುತ್ತೀಯಾ ಎನ್ನುತ್ತಾರೆ. ಮೂರನೆಯ ಡೈಮೆನ್ಷನ್,ಐದನೆಯ ಡೈಮೆನ್ಷನ್ ಒಳಗೆ ಹೋಗಲು ಈ ಜನ್ಮ ಸಾಲುವುದಿಲ್ಲ... ಹಾಗಿದ್ದಾಗ 12 ಡೈಮೆನ್ಷನ್ ಗೆ ಹೇಗೆ ಹೋಗುತ್ತಾರೆ. ಧ್ಯಾನದಲ್ಲಿ ಒಂದು ಗಂಟೆ 2 ಗಂಟೆಗಳು ಕುಳಿತುಕೊಂಡರೆ 5 ನೆಯ ಡೈಮೆನ್ಷನ್ ಗೆ ಹೋಗಿ ಮತ್ತೆ ಇನ್ನೊಂದು ದಿನ ಕುಳಿತುಕೊಂಡಾಗ ಏಳನೆಯ ಡೈಮೆನ್ಶನ್ ಗೆ ಹೋಗಿ ಹಾಗೆ ಹತ್ತನೇ ಡೈಮೆನ್ಷನ್ ಗೆ ಹೊರಟು ಹೋದರೆ ಮತ್ತಿನ್ನೇನಿದೆ...?

ಏನೋ ಅವರು ಹೇಳುತ್ತಿದ್ದಾರೆ ಇವರು ಕೇಳುತ್ತಿದ್ದಾರೆ ಇದರ ಕುರಿತು ಆಲೋಚಿಸುವುದಿಲ್ಲ ಐದನೆಯ ಡೈಮೆನ್ಷನ್ ಒಳಗೆ ಏನಾದರೂ ನಾವು ಹೋದರೆ ನಾವು ಹೇಗೆ ಇರುತ್ತೇವೆ ನಮ್ಮ ಅಭ್ಯಾಸಗಳು ಹೇಗಿರುತ್ತವೆ. ಈಗ ನಮ್ಮ ಪ್ರವರ್ತನೆ ಹೇಗಿದೆ ನಮ್ಮ ಕೆಲಸಗಳು ಹೇಗೆ ಇವೆ? ಎನ್ನುವುದನ್ನು ನೋಡಿಕೊಳ್ಳುವುದಿಲ್ಲ.

ಈ ಸ್ಥಿತಿಯಲ್ಲಿ ಇರುವವರು ಹೇಗಿರುತ್ತಾರೆ? ಎನ್ನುವುದು ತಿಳಿದುಕೊಂಡು, ಹಾಗೆ ನಾವು ತಯಾರಾದಾಗ ನಾವು ಆ ಡೈಮೆನ್ಷನ್ ಗೆ ಹೋದಂತೆ ಲೆಕ್ಕ ಅಷ್ಟೇ ಹೊರತು ಸುಮ್ಮನೆ ಸ್ವಲ್ಪ ಹೊತ್ತು ಧ್ಯಾನದಲ್ಲಿ ಕುಳಿತು ನೀನು 12ನೇ ಡೈಮೆನ್ಷನ್ ಗೆ ಹೋಗುವೆ ಎಂದರೆ ಹೋಗಲು ಆಗುವುದೇ..

ಆದ್ದರಿಂದ ನಿಮ್ಮ ಸ್ಥಿತಿಯನ್ನು ಹೇಳಲು ಕೆಲವರು ಡಿಎನ್ಎ ಎಂದು ಹೇಳುತ್ತಾರೆ. ಕೆಲವರು ಚಕ್ರಗಳು ಎಂದು ಹೇಳುತ್ತಾರೆ. ಕೆಲವರು ಗುಣಗಳು ಎಂದು ಹೇಳುತ್ತಾರೆ ನಾವು ಹೆಚ್ಚಾಗಿ ಗುಣಗಳ ಅನುಸಾರವಾಗಿಯೇ ಹೇಳುತ್ತೇವೆ ಭಗವದ್ಗೀತೆಯಲ್ಲಿ ಗುಣಗಳ ಕುರಿತು ಹೇಳಲಾಗಿದೆ. ಪತ್ರೀಜಿಯವರು ಕೂಡಾ ಹೆಚ್ಚಾಗಿ ಗುಣಗಳ ಕುರಿತು ಹೇಳುತ್ತಾರೆ. ಅದರ ಮೇಲೆ ಫೋಕಸ್ ಮಾಡುತ್ತಾರೆ ಅದಕ್ಕಾಗಿ ನಾವು ಕೂಡ ಗುಣಗಳ ಕುರಿತು ಹೇಳಿಕೊಳ್ಳೋಣ. ಕೆಲವರು ಚಕ್ರಗಳ ಮೇಲೆ ಫೋಕಸ್ ಮಾಡುತ್ತಾರೆ ಅದಕ್ಕೆ ಈ ಚಕ್ರಗಳ ಹುಚ್ಚು ಅತಿಯಾಗಿ ಇರುವವರಿಗೆ ಪತ್ರೀಜಿಯವರು ಏನು ಹೇಳುತ್ತಾರೆಂದರೆ ಅಸಲು ಚಕ್ರಗಳು ಎಂದೇನು ಇರುವುದಿಲ್ಲ.ಅವು ನಾಡಿಮಂಡಲ ಕೂಡುವಿಕೆ ಎಂದು ಹೇಳುತ್ತಾರೆ. ಆ ಚಕ್ರ ಸ್ಥಿತಿಯಲ್ಲಿ ಇರುವವರು ಯಾರು ಹೇಗೆ ಇರುವರು ಎನ್ನುವುದು ಕೂಡ ಅವರು ವಿವರಿಸಿದ್ದಾರೆ ಆದ್ದರಿಂದ ಆ ವಿಷಯಗಳೆಲ್ಲವನ್ನು ವಿವರವಾಗಿ ತಿಳಿದುಕೊಳ್ಳೋಣ.

ಮೊದಲು ಚಕ್ರಗಳು ಎಂದರೆ ಮಾನವನ ಸ್ಥಾಯಿಯನ್ನು ತಿಳಿಸುವ ಸೂಚನೆಗಳು ಎಂದು ನಾವು ತಿಳಿದುಕೊಳ್ಳಬೇಕು. ಈ ಚಕ್ರಸ್ಥಿತಿಯಲ್ಲಿ ಬದಲಾವಣೆ ಎಂದರೆ ಒಂದು ಚಕ್ರಸ್ಥಾಯಿಂದ ಇನ್ನೊಂದು ಚಕ್ರಸ್ಥಾಯಿಗೆ ಸೇರಿಕೊಳ್ಳುವಿಕೆ ಎನ್ನುವುದು ಕೆಲವು ಜನ್ಮಗಳು ಆಗುತ್ತದೆ ಎಂದು ತಿಳಿದುಕೊಳ್ಳಬೇಕು. ಅಷ್ಟೇ ಹೊರತು ಯಾವುದೋ ಮಾರ್ಗದರ್ಶನ ಧ್ಯಾನದಲ್ಲಿ ಕುರಿತು ನಿನ್ನ ಚಕ್ರ ಆಕ್ಟಿವೇಟ್ ಆಗಿದೆ ಎಂದು ಊಹಿಸಿಕೋ ಎಂದು ಹೇಳಿಕೊಂಡಾಗ ತಕ್ಷಣ ಅದು ಆಗುವುದಿಲ್ಲ ಇದನ್ನು ನಂಬುವವರಿಗಿಂತ ಮೂರ್ಖರು ಮತ್ತೆ ಯಾರು ಇರುವುದಿಲ್ಲ.

ಏಕೆಂದರೆ ನಾನು ಧ್ಯಾನದಲ್ಲಿ ಬಂದ ಹೊಸದರಲ್ಲಿ ಧ್ಯಾನ ಚೆನ್ನಾಗಿ ಮಾಡುತ್ತಿದ್ದೆನು ಆಗ ನನಗೆ ಎರಡು ಕಣ್ಣುಗಳ ಮಧ್ಯದಲ್ಲಿ ಅಂದರೆ ಹಣೆಯ ಮಧ್ಯೆ ಸ್ವಲ್ಪ ಎಳೆದಂತೆ ಅನಿಸುತ್ತಿತ್ತು ಆಗ ಸೀನಿಯರ್ ಮಾಸ್ಟರ್ಸ್ ಅನ್ನು ಕೇಳಿದಾಗ ನಿಮಗೆ ಮೂರನೇಯ ಕಣ್ಣು ಆಕ್ಟಿವೇಟ್ ಆಗುತ್ತಿದೆ ಎನ್ನುವುದಕ್ಕೆ ಇದು ಸೂಚನೆ ಎಂದು ಹೇಳಿದರು. ಆಗ ನಾನು "ಓ ಹಾಗಾದರೆ ಆಗಲೇ ನನಗೆ ಮೂರನೇಯ ಕಣ್ಣು ಉತ್ತೇಜನ ಆಗುತ್ತದೆ ಎಂದು ತುಂಬಾ ಉಬ್ಬಿ ಹೋದೆನು. ಆದರೆ ಎಷ್ಟು ದಿನ ಕುಳಿತುಕೊಂಡರು ಓಪನ್ ಆಗುವ ಮಾತಿಲ್ಲ ಏನು ಅವರು ಹೇಳಿದ್ದರಲ್ಲ ಹಾಗೆ ಆಗಲಿಲ್ಲವಲ್ಲ ಎಂದುಕೊಂಡೆ.

ಕೆಲವು ದಿನಗಳಿಗೆ ಆ ಎಳೆಯುವುದು ಕೂಡಾ ನಿಂತು ಹೋಯಿತು. ಇನ್ನು ಮೂರನೇ ಕಣ್ಣಿನ ಗೂಡವೆಯನ್ನು ಬಿಟ್ಟೆನು. ಅಂದಿನಿಂದ ಇಂದಿನವರೆಗೆ ಮೂರನೇ ಕಣ್ಣು ಇಲ್ಲ ಏನಿಲ್ಲ. ಅವರು ಹಾಗೆ ಹೇಳಿದರಿಂದ ಆ ಭ್ರಾಂತಿಯಲ್ಲಿಯೇ ಇದ್ದೆನಷ್ಟೇ.

ಇದನ್ನೆಲ್ಲ ಏಕೆ ಹೇಳುತ್ತಿದ್ದೇನೆ ಎಂದರೆ ಮಾರ್ಗದರ್ಶನ ಧ್ಯಾನದಲ್ಲಿ ಈ ವಿಧವಾಗಿ ಹೇಳುತ್ತಾ ಇದ್ದರೆ ತುಂಬಾ ಜನರಿಗೆ ಮನಸ್ಸಿನಲ್ಲಿ ಹೀಗೆ ಆಗಿದೆಯೇನೋ ಎನ್ನುವ ಭಾವನೆ ಬೆಳೆದು ಸುಪ್ತ ಮನಸ್ಸಿನ ಸ್ಥಿತಿಯಲ್ಲಿ ಅದು ಆಗಿ ಹೋದಂತೆ ಅವರಿಗೆ ಅನಿಸುತ್ತದೆ.

ನೋಡಿ ನಮಗೆ ಸ್ವಪ್ನಾವಸ್ಥೆಯಲ್ಲಿ ಎಲ್ಲವೂ ನಡೆಯುತ್ತಿರುವಂತೆ ಕಾಣಿಸುತ್ತದೆ ಆದರೆ ಎಚ್ಚರಿಕೆಯಾದ ತಕ್ಷಣ ಏನು ಇರುವುದಿಲ್ಲ ಹಾಗೆಯೇ ಮಾರ್ಗದರ್ಶನ ಧ್ಯಾನದಲ್ಲಿ ಕುಳಿತುಕೊಂಡಾಗ, ಸುಪ್ತ ಮನಸ್ಸಿನ ಒಳಗೆ ಹೋದಾಗ ನಾವು ಅಂದುಕೊಂಡಿದ್ದು ನಡೆಯುತ್ತಿರುವಂತೆ ಅನಿಸುತ್ತದೆ ಆದರೆ ಕಣ್ಣು ತೆರೆದಾಗ ಏನು ಇರುವುದಿಲ್ಲ.

ಕನಸು ಬಂದಾಗ ನಿಜವಾಗಿ ನಡೆಯುತ್ತಿದೆ ಎನ್ನುವಂತೆ ಇರುತ್ತದೆ ಉದಾಹರಣೆಗೆ ಕಾರನ್ನು ತೆಗೆದುಕೊಂಡಂತೆ ಯಾವುದೋ ರೀತಿಯಾಗಿ ಕೋಟಿಗಳನ್ನು ಸಂಪಾದಿಸಿದಂತೆ, ದೊಡ್ಡ ಮಹಲನ್ನು ಕಟ್ಟಿದಂತೆ ಅಥವಾ ಕಲೆಕ್ಟರ್ ಆದಂತೆ ಕನಸು ನಡೆಯುತ್ತಾ ಇರುವಷ್ಟು ಹೊತ್ತು ತುಂಬಾ ಗರ್ವ ಪಡುತ್ತೇವೆ.. ಆದರೆ ನಿದ್ರೆಯಿಂದ ಎದ್ದಾಗ ಏನು ಇರುವುದಿಲ್ಲ ಏನಿದೆಲ್ಲಾ ಕನಸೇ ನನಸೇ ನಿಜವಾಗಿ ನಡೆದಿದೆ ಎಂದುಕೊಂಡಿದ್ದೆನಲ್ಲ ಎಂದು ಆಲೋಚಿಸುತ್ತೇವೆ.

ಮಾರ್ಗದರ್ಶಕ ಧ್ಯಾನದಲ್ಲಿ ಬರುವ ಅನುಭವಗಳೆಲ್ಲವೂ ಇಂತಹುದೇ... ಈಗ ನಮ್ಮ ಸೊಸೈಟಿಯಲ್ಲಿ ತುಂಬಾ ಜನರಿಗೆ ಬರುವ ಅನುಭವಗಳೆಲ್ಲ ಇಂತಹುದೆ ಆಗಿದೆ ಅದಕ್ಕಿಂತ ಹೆಚ್ಚು ಏನು ಇಲ್ಲ. ಆ ಮಾಸ್ಟರ್ ಕಾಣಿಸಿದರು ಈ ಮಾಸ್ಟರ್ ಕಾಣಿಸಿದರು ಬಾಬಾಜಿ ಕಾಣಿಸಿದರು. ಶಿವ ಬಂದನು ಇವೆಲ್ಲವೂ ಸುಪ್ತ ಮನಸ್ಸಿನಲ್ಲಿ ಅನಿಸುವಂತಹ ಅನಿಸಿಕೆಗಳೇ! ಅಂದರೆ ಸಪ್ನಾವಸ್ತೆಯಲ್ಲಿ ಕಾಣಿಸುವ ಕನಸುಗಳಂತಹುದೇ ಇವು ಕೂಡ..

ಕನಸು ಬರುತ್ತಿರುವಷ್ಟು ಸಮಯ ಹೇಗೆ ನಿಜ ಎಂದು ಅನಿಸುತ್ತಿರುತ್ತದೆಯೋ ಮಾರ್ಗದರ್ಶನ ಧ್ಯಾನದಲ್ಲಿ ಸುಪ್ತಮನಸ್ಸಿನ ಸ್ಥಿತಿಗೆ ಹೋದಾಗ, ಹೀಗೆ ಅನಿಸುತ್ತದೆ.ಅಂದರೆ ಬರುವ ಅನುಭವಗಳು ಎಲ್ಲವೂ ಇಂತಹುದೆ ಎಂದು ನನಗೆ ಅನಿಸಿತು. ಇಂತಹ ಅನುಭವವಾಯಿತು ಎಂದು ಹೇಳುತ್ತಾರೆ ಆದರೆ ಅದು ಕನಸಿನಂತದ್ದು ಎಂದು ತಿಳಿದುಕೊಳ್ಳಿ.

ನಿಮ್ಮ ಜ್ಞಾನದ ಪರಿಧಿ ಹೆಚ್ಚುತ್ತಾ ಹೋದಂತೆ ಇವೆಲ್ಲವೂ ಅರ್ಥವಾಗುತ್ತದೆ. ಇಲ್ಲದಿದ್ದರೆ ಅನುಭವಗಳೆಲ್ಲವೂ ನಿಜ ಎಂದುಕೊಳ್ಳುತ್ತಾರೆ. ಪತ್ರೀಜಿಯವರು ನಿಮ್ಮನ್ನು ಪ್ರೋತ್ಸಾಹಿಸಲು ಹಾಗೆ ಹೇಳುತ್ತಾರೆ ಅಷ್ಟೇ.

ಒಂದು ದಿನ ನಾನು ಹೈದರಾಬಾದ್ ನಲ್ಲಿ ಪತ್ರೀಜಿಯವರ ಮನೆಗೆ ಹೋದೆನು, ಅವರು ಒಬ್ಬರೇ ಇದ್ದರು.ಸ್ವಲ್ಪ ಹೊತ್ತಿಗೆ ಒಬ್ಬಾಕೆ ಬಂದರು.,ಆಕೆ ಪತ್ರಿಯವರ ಬಳಿ ಕುಳಿತು, ತನ್ನ ಧ್ಯಾನ ಅನುಭವಗಳನ್ನು ಹೇಳುತ್ತಿದ್ದಳು.ಕೇಳುತ್ತಾ ಇಷ್ಟು ಅನುಭವಗಳು ಈಕೆಗೆ ಬಂದಿದೆಯೇ ಎಂದು ನನಗೆ ಹುಚ್ಚು ಹಿಡಿದಂತೆ ಆಗುತ್ತಿತ್ತು.ಒಂದೊಂದು ಆಶ್ಚರ್ಯ ಗೊಳಿಸುವ ಅನುಭವಗಳನ್ನು ಹೇಳುತ್ತಿದ್ದರೆ,ಪತ್ರಿಜೀ ಸ್ವಲ್ಪ ಹೊತ್ತು ಕೇಳಿದರು. ನಂತರ ಆಕೆಯ ಮಾತುಗಳು ಸಹಿಸಲಾರದಂತಾಗಿರಬೇಕು... ಅಗ ಅವರು ಏನು ಹೇಳಿದರೆಂದರೆ, ಅಮ್ಮ ನಿನಗೆ ಎಷ್ಟು ಅನುಭವಗಳು ಬಂದರೂ ಅದೇನು ದೊಡ್ಡದಲ್ಲ.. ಹಂದಿ ಕಾಣಿಸಿತು ಅದರಲ್ಲೇನು ವಿಶೇಷ? ಅಥವಾ ಕೃಷ್ಣ ಕಾಣಿಸಿದರೆ ಏನು ವಿಶೇಷ..ನಿನಗೇ ಬೇಕಾಗಿರುವುದು ಅದಲ್ಲ ನಿಜವಾಗಿ ಕೃಷ್ಣನೆ ಕಾಣಿಸಿದರೆ ಕಾಣಿಸಿದನೆಂದು ಉಬ್ಬಿಹೋಗುವುದಲ್ಲ.. ಕಾಣಿಸಿದಾಗ, ಆ ಕೃಷ್ಣನ ಕೊರಳಲ್ಲಿ ಹಾರಗಳಿವೆಯೇ ಆ ಹಾರದಲ್ಲಿ ಯಾವ ಬಣ್ಣದ ಕಲ್ಲುಗಳು ಇವೆ? ಅವು ಮುತ್ತಿನದೆ ಎನ್ನುವುದನ್ನು ಗಮನಿಸಬೇಕು.. ಅಷ್ಟು ಆಳವಾಗಿ ಗಮನಿಸಿದರೆ, ನಿನ್ನ ಧ್ಯಾನ ಸ್ಥಿತಿಹೆಚ್ಚಿದಂತೆ ಎಂದರು.

ಹಾಗೇ ಹಂದಿ ಕಾಣಿಸಿದೆ, ಅದು ಎಲ್ಲಿದೆ? ಕೆಸರಿನಲ್ಲಿ ಇದೆಯೇ? ನೆಲದ ಮೇಲೆ ಇದೆಯೇ? ಅದರ ಉಗುರುಗಳು ಹೇಗಿವೆ? ಅಥವಾ ಕೂದಲು ಹೇಗಿದೆ? ಎನ್ನುವುದು ಡೀಟೇಲ್ ಆಗಿ ನೀನು ನೋಡಬಲ್ಲೆಯಾದರೆ ಆಗ ನೀನು ಧ್ಯಾನದಲ್ಲಿ ಅಭಿವೃದ್ಧಿ ಹೊಂದಿದಂತೆ ಇದು ಕಾಣಿಸಿತು,ಅದು ಕಾಣಿಸಿತು ಎಂದರೆ... ಕಾಣಿಸಿದರೆ ಏನೀಗ? ಎಂದು ಸಾರ್ ಬೈದರು.

ಪ್ರತಿ ಸರ್ ಹಾಗೆ ಹೇಳಿದ ನಂತರ ಅನುಭವಗಳು ದೊಡ್ಡದೇನಲ್ಲ ಎಂದು ಅರ್ಥವಾಯಿತು. ಕಾಣಿಸಿದ ಮಾತ್ರಕ್ಕೆ ನಾವೇನು ದೊಡ್ಡ ವ್ಯಕ್ತಿಗಳಾಗುವುದಿಲ್ಲ ಎನ್ನುವುದು ನನಗೆ ಚೆನ್ನಾಗಿ ಅರ್ಥವಾಯಿತು. ಅಂದಿನಿಂದ ನಾನು ಅನುಭವಗಳಿಗೆ ಪ್ರಾಮುಖ್ಯತೆ ನೀಡಲಿಲ್ಲ.

ಅಂದಿನಿಂದ.... ನಾನು ಎಷ್ಟು ಅಭಿವೃದ್ಧಿಯಾಗಿದ್ದೇನೆ? ಅಂದರೆ ನನ್ನ ಪ್ರವರ್ತನೆಯಲ್ಲಿ ಎಷ್ಟು ಬದಲಾವಣೆ ಬಂದಿದೆ? ಎಷ್ಟು ಜ್ಞಾನ ಸಂಪಾದಿಸಿ ಕೊಂಡಿದ್ದೇನೆ? ಅದಕ್ಕೆ ತಕ್ಕ ಬದಲಾವಣೆ ನನ್ನಲ್ಲಿ ಬಂದಿದೆಯೇ? ಇಲ್ಲವೇ?ಎನ್ನುವುದು ಮುಖ್ಯವೇ ಹೊರತು ಇವೆಲ್ಲವೂ ನಮಗೆ ಮುಖ್ಯವಲ್ಲ ಎಂದು ನಾನು ಅರ್ಥಮಾಡಿಕೊಂಡೆನು. ಅದೇ ಎಲ್ಲರಿಗೂ ಹೇಳುವೆನು ಕೂಡ... ಇಂದಿಗೂ ಯಾರು ಅನುಭವಗಳು ಹೇಳಿದರೂ,ಏಕೆ ಇವೆಲ್ಲಾ? ನಿನ್ನ ಪ್ರವರ್ತನೆಯಲ್ಲಿ ಏನು ಬದಲಾವಣೆ ಬಂದಿದೆ? ನೀನು ಎಷ್ಟು ತಪ್ಪುಗಳನ್ನು ಸರಿ ಮಾಡಿಕೊಳ್ಳುತ್ತಿರುವೆ?ನಿನ್ನ ಜ್ಞಾನ ಎಷ್ಟು ಹೆಚ್ಚಿದೆ?ಎನ್ನುವುದನ್ನು

ನೋಡಿಕೋ ಎನ್ನುತ್ತೇನೆ. ಅದೇನು ಇಲ್ಲದೆ ನನಗೆ ಅದು ಬಂದಿದೆ ಇದು ಕಾಣಿಸಿದೆ ಅವರು ಕಾಣಿಸಿದರು ಎಂದು ಹೇಳಿದರೆ,ಅದರಿಂದ ಆಗುವ ಉಪಯೋಗವೇನು? ಎಂದು ಕೇಳುತ್ತೇನೆ.

ನಿನಗೆ ಮೂರನೇ ಕಣ್ಣು ಬಂದರೆ ಯಾರಿಗೇನು? ಆರನೆಯ ಕಣ್ಣು ಬಂದರೆ ಯಾರಿಗೆ ಏನು? ಇವೆಲ್ಲಾ ಏತಕ್ಕೆ... ನಿನ್ನ ಪ್ರವರ್ತನೆಯಲ್ಲಿ ಎಷ್ಟು ಬದಲಾವಣೆ ಬಂದಿದೆ ಅದು ನೋಡಿಕೋ ಎಂದು ಹೇಳುತ್ತೇನೆ.

ನನಗೆ ಒಬ್ಬಾಕೆ ಫೋನ್ ಮಾಡಿದಳು ಆಕೆ ಏನು ಹೇಳಿದಳೆಂದರೆ, ಧ್ಯಾನದಲ್ಲಿ ನನ್ನ ಹಿಂದೆ ದೇವರಿಗೆ ಬಂದಂತೆ ನಾಲ್ಕು ಕೈಗಳು ಬಂದಿವೆ,. ನನಗೆ ಮೂರನೇಯ ಕಣ್ಣು ಕೂಡ ಓಪನ್ ಆಗಿದೆ ಎಂದು ಏನೇನೋ ಹೇಳಿದಳು. ಆಕೆ ಇನ್ನು ಏನು ಹೇಳಿದಳೆಂದರೆ, ಯಾರೋ ನನ್ನನ್ನು ತುಂಬಾ ಬಾಧಿಸುತ್ತಿರುವಂತೆ ಅನಿಸುತ್ತಿದೆ ಎಂದಳು.

ಸ್ವಲ್ಪ ಹೊತ್ತು ಕೇಳಿದೆನು, ನಂತರ ಅಮ್ಮ ಇವೆಲ್ಲ ನನಗೆ ಏಕೆ ಹೇಳುತ್ತಿರುವೆ ಎಂದು ಕೇಳಿದೆ. ಮತ್ತೆ ಏನು ಸಮಸ್ಯೆಯನ್ನು ಹೇಳಿದಳು. ಆಗ ನಾನು ನಿನಗೆ ಇಷ್ಟು ಅನುಭವಗಳು ಬರುತ್ತವೆ ನಿನ್ನ ಮೂರನೇಯ ಕಣ್ಣು ಓಪನ್ ಆಗಿದೆ,ಆದರೆ ನೀನು ನಿನ್ನ ಸಮಸ್ಯೆಗಳ ಕುರಿತು ನನಗೆ ಏಕೆ ಹೇಳುತ್ತಿರುವೆ?ಈ ಸ್ಥಿತಿಗೆ ಏರಿದ ನಂತರ ನಿನ್ನ ಸಮಸ್ಯೆಯನ್ನು ನೀನೆ ಪರಿಸ್ಕರಿಸಿಕೊಳ್ಳಲಾರೆಯಾ? ನನಗೆ ಏಕೆ ಹೇಳುವೆ ಎಂದೇನು.

ಆಗ ಆಕೆ ನೀವು ದೊಡ್ಡವರು ಎಂದು ಹೇಳುತ್ತಿದ್ದೇನೆ ಎಂದಳು. ಆಗ ನಾನು ನಾನು ದೊಡ್ಡವನು ಹೇಳುತ್ತಿರುವೆ , ಆದರೆ ನನಗೆ ಅನುಭವಗಳು ಏನು ಇಲ್ಲ ನಾನು ದೊಡ್ಡವನು ಹೇಗೆ ಆಗುವೆನು ಎಂದೆನು. ಇಲ್ಲ ನೀವು ಹೇಳಬಲ್ಲಿರಿ ಅದಕ್ಕೆ ಅಂದಳು.

ಆಗ ಹೇಳಿದೆನು ಅಮ್ಮ ತಿಳಿದುಕೋ ಅನುಭವಗಳೆಲ್ಲವೂ ಮನಸ್ಸಿನ ಒಂದು ಮಾಯಾಜಾಲ ಹೊರತು ಮತ್ತೇನು ಇಲ್ಲ ನಿನಗೆ ಹಾಗೆ ಅನಿಸುತ್ತಿದೆ ಹೊರತು, ಅದೇನು ಕಾಣಿಸಿದಂತೆ ಅಲ್ಲ ನೀನು ಕಣ್ಣು ತೆರೆದರೆ ಅವೆಲ್ಲ ಇರುವುದಿಲ್ಲ.ನಿನ್ನ ಸುಪ್ತ ಮನಸ್ಸಿನಲ್ಲಿ ಅನಿಸಿದೆ ಅಷ್ಟೇ! ಕಾಣಿಸುವುದು ಎಂದರೆ ನೀವು ಜಾಗೃತ ಮನಸ್ಸಿನಲ್ಲಿ ಅಂದರೆ ಜಾಗ್ರತೆಯಲ್ಲಿ ಇರುವಾಗ ಏನೇ ನೋಡಿದರೂ ಅದು ಕಾಣಿಸಿದಂತೆ.

ನೋಡಿ ಇವೆಲ್ಲ ಅಜ್ಞಾನದಲ್ಲಿ ಇದ್ದು ಏನೇನೋ ಪುಸ್ತಕಗಳನ್ನು ಓದಿ ಹೇಳುತ್ತಾರೆ ಹೊರತು ಜ್ಞಾನದಿಂದ ಹೇಳುವುದಲ್ಲ. ಪತ್ರಿ ಸಾರ್ ಪುಸ್ತಕಗಳು ಏನಾದರೂ ಓದಿರುವೆಯಾ,ನಿನ್ನ ಬಳಿ ಎಷ್ಟು ಪುಸ್ತಕಗಳಿವೆ?ಎಂದು ಮತ್ತೆ ಆಕೆಯನ್ನು ಕೇಳಿದೆ. ಒಂದು ಕೂಡಾ ಇಲ್ಲ ಎಂದು ಹೇಳಿದಳು. ಹಾಗಾದರೆ ಧ್ಯಾನಕ್ಕೆ ಬಂದು ಇಷ್ಟು ದಿನಗಳಾಗಿದೆ

ಎನ್ನುತ್ತಿರುವೆ ಇಷ್ಟು ಅನುಭವಗಳು ಹೇಳುತ್ತಿರುವೆ ಪತ್ರಿ ಸರ್ ಪುಸ್ತಕ ಒಂದು ಕೂಡ ನೀನು ಕೊಂಡು ಓದಲಿಲ್ಲವೇ... ಎಂದು ಆಶ್ಚರ್ಯಪಟ್ಟೆನು. ಮತ್ತೇಕೆ ಧ್ಯಾನಕ್ಕೆ ಬಂದಿರುವೆ. ಯಾರೋ ಹೇಳಿದ್ದನ್ನು ಕೇಳಿ ಏನೇನೋ ಫೀಲ್ ಮಾಡಿ ಗೊಂದಲದಲ್ಲಿ ಸಿಲುಕಿರುವೆ, ನೀನು ಧ್ಯಾನಕ್ಕೆ ಬಂದು ಏನು ಉಪಯೋಗವಿಲ್ಲ ಎಂದೆನು.

ನಾನೊಂದು ಹೇಳುತ್ತೇನೆ ಕೇಳು ನಿನ್ನ ಅನುಭವಗಳನ್ನೆಲ್ಲವನ್ನೂ, ಪಕ್ಕಕ್ಕಿಡು ಮೊದಲು ಪತ್ರಿಯವರು ಹೇಳಿದ ಈ ನಾಲ್ಕು ವಿಷಯಗಳನ್ನು ಅನುಸರಿಸು ಎಂದೆನು.

1. ಶ್ವಾಸದ ಮೇಲೆ ಗಮನವಿಟ್ಟು ಧ್ಯಾನ ಮಾಡು ಅದರೊಂದಿಗೆ ಸಾತ್ವಿಕವಾದ ಶಾಖಾಹಾರ ತೆಗೆದುಕೋ.

2. ಪತ್ರಿ ಸರ್ ಅವರ ಪುಸ್ತಕಗಳನ್ನು ಓದು

3. ಆತ್ಮ ಸಂದೇಶಗಳನ್ನು ಕೇಳು ಅಂದರೆ ಭೀಮವರದಲ್ಲಿ ನಡೆಯುವ ಆತ್ಮಜ್ಞಾನ ಶಿಕ್ಷಣ ಶಿಬಿರಗಳಲ್ಲಿ ಭಾಗವಹಿಸು.

4. ನೀನು ಸಾಧ್ಯವಾದಷ್ಟು ಆತ್ಮ ಸೇವೆಗಳು ಮಾಡು.

ಹಾಗೆ ಮಾಡಿದರೆ,ನಿನಗೆ ತಿಳಿಯದಂತೆ ಕೆಲವು ದಿನಗಳಿಗೆ ದೊಡ್ಡ ಬದಲಾವಣೆಗಳು ನಿನ್ನಲ್ಲಿ ಬರುತ್ತದೆ. ಮೊದಲು ನಿನ್ನ ಬುದ್ಧಿ ವಿಕಾಸವಾಗುತ್ತದೆ, ನಂತರ ಜ್ಞಾನ ಉಂಟಾಗುತ್ತದೆ. ಇದೇ ನಾನು ಪ್ರತಿಯೊಬ್ಬರಿಗೆ ಹೇಳುವುದು... ಬುದ್ಧಿ ವಿಕಾಸವಾದರೆ ನೀವು ಪ್ರತಿಯೊಂದನ್ನು ಅರ್ಥಮಾಡಿಕೊಳ್ಳಬಲ್ಲಿರಿ.ವಿಶ್ಲೇಷಿಸಿ ಕೊಳ್ಳಬಲ್ಲಿರಿ. ಪ್ರತಿಯೊಂದನ್ನು ವಿವರವಾಗಿ ತಿಳಿದುಕೊಳ್ಳುತ್ತೀರಾ. ಯಾವುದು ಸರಿ ಯಾವುದು ತಪ್ಪು ಎನ್ನುವುದು ಚೆನ್ನಾಗಿ ತಿಳಿಯುತ್ತದೆ.

ನಮ್ಮ ಸೊಸೈಟಿಯಲ್ಲಿ ಎಷ್ಟೋ ವಿಧಗಳಾಗಿ ಹೇಳುವವರು ಇದ್ದಾರೆ ಒಂದು ವಿಷಯವನ್ನು ಒಬ್ಬರು ಒಂದು ವಿಧವಾಗಿ ಹೇಳಿದರೆ, ಮತ್ತೊಬ್ಬರು ಅದಕ್ಕೆ ಭಿನ್ನವಾಗಿ ಹೇಳುತ್ತಾರೆ. ಇದರಿಂದ ಕೇಳುವವರು ಕನ್ಫ್ಯೂಸ್ ಆಗುತ್ತಾರೆ. ಆತನದೇ ಸರಿಯೇ? ಈತನದು ಸರಿಯೇ? ಎಂದು ಅನಿಸಿದಾಗ ನೀವು ಸರಿಯಾದದ್ದು ನಿರ್ಣಯಿಸಿ ಕೊಳ್ಳಬಲ್ಲವರಾದರೆ ನಿಮ್ಮ ಬುದ್ಧಿ ಚೆನ್ನಾಗಿ ಕೆಲಸ ಮಾಡುತ್ತಿರುವಂತೆ, ಆ ಸ್ಥಾಯಿಗೆ ಬಂದರೇನೇ ಒಳ್ಳೆಯದು. ಆದ್ದರಿಂದ ಶ್ವಾಸದ ಮೇಲೆ ಗಮನ ಇಟ್ಟು ಧ್ಯಾನ ಮಾಡಿದಾಗ ನಿಮಗೆ ತಿಳಿಯದಂತೆಯೇ ನಿಮ್ಮ ಮನಸ್ಸು ಶುದ್ಧವಾಗಿ ನಿಮ್ಮ ಪ್ರವರ್ತನೆಯಲ್ಲಿ ಎಷ್ಟೋ ಬದಲಾವಣೆ ಬರುತ್ತದೆ.

ಈ ಮೊದಲು ನಾವು ಸತ್ತುಹೋದ ನಂತರ ಮೇಲೆ ಎಷ್ಟೋ ಲೋಕಗಳು ಇದೆ ಎಂದು... ಭೂಮಿ ಮೇಲೆ ಮಾಡುವ ಕರ್ಮಗಳ ಅನುಸಾರ ಮಾಡುವ ಸಾಧನೆಯ ಅನುಸಾರ ಪರದಲ್ಲಿ ಹೊಂದುವ ಲೋಕಗಳು ಆಧಾರವಾಗಿರುತ್ತದೆ ಎಂದು ಹೇಳಿಕೊಂಡೆವು. ಮುಖ್ಯವಾಗಿ ಒಂದು ವಿಷಯದ ಮೇಲೆ ಅಂದರೆ ಜನಾಲೋಕದ ಮೇಲೆ ನಾವು ಹೆಚ್ಚು ಫೋಕಸ್ ಮಾಡಿದೆವು.

ಅದೇನೆಂದರೆ ಜನಾಲೋಕದ ಕೆಳಗೆ ಭೂಲೋಕದೊಂದಿಗೆ ಮೂರು ಲೋಕಗಳು ಇರುತ್ತವೆ. ಜನಾಲೋಕದ ಮೇಲೆ ಇನ್ನೊಂದು ಮೂರು ಲೋಕಗಳು ಇವೆ ಎಂದು ಹೇಳಿಕೊಂಡೆವು. ಕೆಳಗೆ ಇರುವ ಮೂರು ಲೋಕಗಳು "ಭೂಲೋಕ","ಭುವರ್ ಲೋರ್ಕ" "ಸುವರ್ ಲೋಕ "ಎಂದು ಮೇಲೆ ಇರುವ ಲೋಕಗಳು "ಮಹಾಲೋಕ", "ತಪೋಲೋಕ","ಸತ್ಯ ಲೋಕ" ಎಂದು ಹೇಳಿಕೊಂಡೆವು ಅಂದರೆ ಮಧ್ಯದಲ್ಲಿ ಇರುವ ಲೋಕವೇ "ಜನಾಲೋಕ" ಎಂದು ತಿಳಿದುಕೊಳ್ಳಬೇಕು.

ಜನಾ ಲೋಕದ ಕೆಳಗೆ ಇರುವ ಲೋಕಗಳಿಗೆ ಸೇರಿಕೊಂಡವರು, ಜನಾಲೋಕಕ್ಕೆ ಹೋಗಿ ಮತ್ತೆ ಭೂಮಿ ಮೇಲೆ ಬರುತ್ತಾರೆ.ಆದರೆ ಇವರು ಆ ಮೇಲಿನ ಲೋಕಗಳಿಗೆ ಹೋಗಲಾರರು. ಯಾರು ಈ ಜನಾಲೋಕ ದಾಟಿ ಮೇಲಿನ ಲೋಕಗಳಿಗೆ ಹೋಗಬಲ್ಲರೋ, ಅವರು ತುಂಬಾ ಉನ್ನತ ಸ್ಥಿತಿಯಲ್ಲಿ ಇರುವವರು. ಹಾಗೂ ತುಂಬಾ ಅದೃಷ್ಟವಂತರು ಎಂದು ಹೇಳಿಕೊಂಡಿದ್ದೇವೆ. ಆದ್ದರಿಂದ ಯಾರಾದರೂ ಸರಿಯೇ ಜನಾಲೋಕ ದಾಟಿ ಮೇಲೆ ಇರುವಂತಹ ಉನ್ನತ ಲೋಕಗಳನ್ನು ಸೇರಿಕೊಳ್ಳುವ ಪ್ರಯತ್ನವನ್ನು ಮಾಡಬೇಕು. ನೆನಪಿನಲ್ಲಿಟ್ಟುಕೊಳ್ಳಿ, ಕೃಷಿಮಾಡಿದರೆ ಸಾಧಿಸಲಾರದ್ದು ಏನು ಇಲ್ಲ ಕಷ್ಟಪಟ್ಟರೆ ಫಲಿತವೇಕೆ ಬರುವುದಿಲ್ಲ? ಆದ್ದರಿಂದ ನೀವು ಈ ವಿಷಯವನ್ನು ತಿಳಿದುಕೊಂಡು ಈಗ ಮಾಡುತ್ತಿರುವುದ್ಕಕಿಂತ ಇನ್ನೂ ಕೆಲಸ ಮಾಡುತ್ತಾ ಹೋದಂತೆ... ಜನಾಲೋಕ ದಾಟಿ, ಹೋಗುವ ಅವಕಾಶ ಹೆಚ್ಚಾಗುತ್ತದೆ.

ಪತ್ರೀಜಿಯವರು ಹೇಳಿದಂತೆ ಸಾಧನೆ, ಸ್ವಾಧ್ಯಾಯ, ಸಜ್ಜನ ಸಾಂಗತ್ಯ ಆತ್ಮಸೇವೆಗಳ ಮೂಲಕ ಖಂಡಿತವಾಗಿ ಎಷ್ಟೋ ಜ್ಞಾನವನ್ನು ಸಂಪಾದಿಸಿಕೊಳ್ಳುತ್ತಾರೆ. ಅಷ್ಟೇ ಅಲ್ಲ ಅವರಲ್ಲಿ ಇರುವ ಕೆಟ್ಟದ್ದನ್ನು ಸರಿ ಮಾಡಿಕೊಳ್ಳುತ್ತಾರೆ. ಹಾಗೆ ಎಷ್ಟೋ ಬದಲಾವಣೆಯನ್ನು ತಂದುಕೊಳ್ಳುತ್ತಾರೆ ಇದೆಲ್ಲವೂ ಅಭಿವೃದ್ಧಿಯ ಸಾಲಿಗೆ ಸೇರುತ್ತದೆ.

ನೀವು ಅಭಿವೃದ್ಧಿಯಾಗುತ್ತಾ ಹೋದಂತೆ ನಿಮ್ಮ ಚಕ್ರ ಸ್ಥಿತಿಯಲ್ಲಿ ಬದಲಾವಣೆ ಬರುತ್ತದೆ. ಮರಣಿಸಿದ ನಂತರ ನೀವು ಸೇರಿಕೊಳ್ಳುವ ಲೋಕಗಳು ಕೂಡಾ ಆಧಾರವಾಗಿರುತ್ತದೆ.

ಆದ್ದರಿಂದ ಅವೆಲ್ಲವನ್ನು ಈಗ ತಿಳಿದುಕೊಳ್ಳೋಣ. ಚಕ್ರಗಳು ಆರು ಏಳನೆಯದು ಸಹಸ್ರಾರ ಸ್ಥಿತಿ; ಅವು 1.ಮೂಲಾಧಾರ, 2.ಸ್ವಾಧಿಷ್ಟಾನ, 3.ಮಣಿಪೂರಕ, 4.ಅನಾಹತ,5.ವಿಶುದ್ಧ, 6.ಆಜ್ಞಾ, 7.ಸಹಸ್ರಾರ ಸ್ಥಿತಿ.

## "ಮೂಲಾಧಾರ"

ಮೊದಲನೆಯದು ಮೂಲಾಧಾರ. ಮೂಲಾಧಾರ ಎಂದರೆ ಮೂಲ+ಆಧಾರ. ಇಲ್ಲಿ ಶರೀರಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಲಾಗುತ್ತದೆ. ಶರೀರದೊಂದಿಗೆ ಬಂದ ಕುಟುಂಬ ಸದಸ್ಯರೊಂದಿಗೆ...,ತಂದೆ,ತಾಯಿ,ಮಗ, ಮಗಳು ಸಂಸಾರ ದೊಂದಿಗೆ ಹೆಚ್ಚು ಆಸಕ್ತಿ ಬೆಳೆಸಿಕೊಳ್ಳುತ್ತಾರೆ. ಈ ಮೂಲಾಧಾರ ಚಕ್ರ ಸ್ಥಿತಿಯಲ್ಲಿ ಇರುವವರು, ಚೆನ್ನಾಗಿ ಸಂಪಾದಿಸಿ ಚೆನ್ನಾಗಿ ಎಂಜಾಯ್ ಮಾಡಲು ಪ್ರಾಮುಖ್ಯತೆ ನೀಡುತ್ತಾರೆ.

ಈ ಚಕ್ರ ಸ್ಥಿತಿಯಲ್ಲಿ ಇರುವವರು ಪೂಜೆ ಪ್ರಾರ್ಥನೆಗಳು ಮಾಡುತ್ತಾರೆ. ಇವರನ್ನು,ತಮೋ ಗುಣದಲ್ಲಿ ಇರುವ ರವರೆಂದು ಸಹ ಹೇಳಬಹುದು. ಈ ತಮೋ ಗುಣದಲ್ಲಿ ಸುಮಾರು 100 ರಿಂದ 150 ಜನ್ಮಗಳು ತೆಗೆದುಕೊಳ್ಳುತ್ತಾರೆ. ಅಂದರೆ ಇಷ್ಟು ಜನ್ಮಗಳು ಎತ್ತಿದರೆ ಮಾತ್ರ ನಂತರದ ಚಕ್ರ ಸ್ಥಿತಿಗೆ ಅವರು ಹೋಗುವರು.

ಆದ್ದರಿಂದ ನೆನಪಿನಲ್ಲಿಟ್ಟುಕೊಳ್ಳಿ, ಸುಮ್ಮನೆ ಚಕ್ರ ಧ್ಯಾನದಲ್ಲಿ ಕುಳಿತುಕೊಂಡರೆ 150 ಜನ್ಮಗಳಲ್ಲಿ ಬರುವ ಬದಲಾವಣೆ ಗಂಟೆಗಳಲ್ಲಿ ಬರುವುದೇ... ಹೇಗೆ ಸಾಧ್ಯ? ಇದು ಅಸಂಭವ. ಅವರು ಹೇಳುವುದರಲ್ಲೂ ಅರ್ಥವಿಲ್ಲ. ಇವನು ಬದಲಾವಣೆ ಬಂದಿದೆ ಎಂದುಕೊಳ್ಳುತ್ತಾನೆ. ಹೊರತು ಸ್ವಲ್ಪವೂ ಬದಲಾವಣೆ ಆಗಿರುವುದಿಲ್ಲ.ಪ್ರವರ್ತನೆ ನೋಡಿದರೆ ಮಾಮೂಲಾಗಿಯೇ ಇರುತ್ತದೆಯೇ ಹೊರತು ಸ್ವಲ್ಪವೂ ಬದಲಾವಣೆ ಇರುವುದಿಲ್ಲ.

## "ಸ್ವಾಧಿಷ್ಟಾನ"

ಹಾಗೆಯೇ ಚಕ್ರದ ಸ್ವಾಧಿಷ್ಟಾನದ ಕುರಿತು ಪತ್ರೀಜಿಯವರು ಏನು ಹೇಳಿದ್ದಾರೆ ಎಂದರೆ, ಸ್ವ+ ಅಧಿಷ್ಟಾನ ಮನಸ್ಸಿನೊಂದಿಗೆ ಸಂಬಂಧ ಇರುವುದು... ಇದು ಮನೋಸ್ಥಿತಿ. 'ಸ್ವ' ಎಂದರೆ ನಾನು ಎನ್ನುವುದನ್ನು ಅಧಿಷ್ಟಿಸಿ ಇರುತ್ತದೆ.

ಎನ್ನುತ್ತಾರೆ. ಈ ಚಕ್ರ ಸ್ಥಿತಿಯಲ್ಲಿರುವವರಲ್ಲಿ ಎಲ್ಲದಕ್ಕೂ 'ನಾನು' 'ನನ್ನದು' ಎನ್ನುವ ಪ್ರಸ್ತಾವನೆ ಹೆಚ್ಚಾಗಿ ಕಾಣಿಸುತ್ತದೆ. ಇಲ್ಲಿ ನಾನು ಹಿಂದೂ, ನಾನು ಕ್ರಿಶ್ಚಿಯನ್, ನಾನು ಮುಸ್ಲಿಂ, ಮಂತ್ರಿ, ಎಂ.ಎಲ್.ಎ. ಪ್ರೆಸಿಡೆಂಟ್, ಉದ್ಯಮಿ, ಡಾಕ್ಟರ್, ಆಕ್ಟರ್, ಅವನು ನನ್ನ ಶತ್ರು ಅವರು ಆ ಜಾತಿ ಇಂತಹ ಜಾತಿ ಎನ್ನುವ ಭಾವಗಳೊಂದಿಗೆ ಇರುತ್ತಾರೆ.

ಇವರಿಗೆ ಎಷ್ಟು ಹೊತ್ತು ಉತ್ತಮನಾಗಬೇಕೆಂಬ ಹಂಬಲ ಇರುತ್ತದೆ. ಈ ಸ್ಥಿತಿಯಲ್ಲಿರುವವರು ಪೂಜೆಗಳೊಂದಿಗೆ ಸ್ತೋತ್ರಗಳು ಕೂಡ ಓದುತ್ತಾರೆ. ಕರ್ಮಗಳು ಕೂಡ ಮಾಡುತ್ತಿರುತ್ತಾರೆ. ಕೆಲವು ಪಾಪ ಕರ್ಮಗಳು ಕೆಲವು ಪುಣ್ಯಕರ್ಮಗಳು ಮಾಡುತ್ತಾ ಇರುತ್ತಾರೆ. ಇಂತಹ ಲಕ್ಷಣಗಳು ಇದ್ದರೆ ಈ ಚಕ್ರ ಸ್ಥಿತಿಯಲ್ಲಿ ಇದ್ದಾರೆ ಎಂದು ಅರ್ಥ...ಇವರು ರಜೋಗುಣದಲ್ಲಿ ಇರುತ್ತಾರೆ ಈ ಸ್ವಾಧಿಷ್ಟಾನ ಚಕ್ರದೊಳಗಿಂದ ನಂತರದ ಚಕ್ರಸ್ಥಿತಿಗೆ ಸೇರಿಕೊಳ್ಳಬೇಕೆಂದರೆ, ಇನ್ನೊಂದು 100 ರಿಂದ 150 ಜನ್ಮಗಳು ಹಿಡಿಯುತ್ತದೆ. ಅಷ್ಟೇ ಹೊರತು ಸುಮ್ಮನೆ ಚಕ್ರಧ್ಯಾನ ಮಾಡಿದರೆ ಒಮ್ಮೆಲೇ ಬದಲಾಗುವುದಿಲ್ಲ.

## "ಮಣಿಪೂರಕ"

ನಂತರದ್ದು ಮಣಿಪೂರಕ ಚಕ್ರ ಅಂದರೆ ಮಣಿ + ಪೂರಕ. ಪತ್ರೀಜಿಯವರು ಇದರ ಬಗ್ಗೆ ಏನು ಹೇಳಿದ್ದಾರೆ ಎಂದರೆ ಒಳಗೆ ಖಾಲಿ ಆದರೆ ಮೇಲೆ ಟೊಳ್ಳು ನೋಡಲು ಮಾತ್ರ ಶೋಭಿಸುತ್ತಿರುತ್ತಾರೆ,ಎಂದು ಹೇಳಿದ್ದಾರೆ. ಇದು ಬುದ್ಧಿಯೊಂದಿಗೆ ಸಂಬಂಧ ಅಂದರೆ ಬುದ್ಧಿಯ ಸ್ಥಿತಿ ಎನ್ನುತ್ತಾರೆ. ಈ ಸ್ಥಿತಿಯಲ್ಲಿ ಪಂಡಿತರು ಪ್ರೊಫೆಸರ್ ಗಳು,ಪಿ ಎಚ್ ಡಿ ಮಾಡಿದವರು, ಸಂಗೀತ ಕಲಾಕಾರರು, ವಿಜ್ಞಾನಿಗಳು ಆಗಿರುತ್ತಾರೆ.ಮಣಿಪೂರಕ ಚಕ್ರಸ್ಥಿತಿಯಲ್ಲಿ ಇರುವವರು, ಸುಮಾರು 250ರಿಂದ 300 ಜನ್ಮಗಳು ತೆಗೆದು ಕೊಂಡಿರುತ್ತಾರೆ. ಇಲ್ಲದಿದ್ದರೆ ಈ ಸ್ಥಾಯಿಗೆ ಬರಲು ಸಾಧ್ಯವಿಲ್ಲ. ಇವರು ಸಾತ್ವಿಕ ಗುಣದಲ್ಲಿ ಇರುತ್ತಾರೆ, ಹೋಗಿ ಭೂಮಿ ಮೇಲೆ ಮರಳಿ ಬರುತ್ತಾರೆ ಅಂದರೆ ಮೂಲಾಧಾರ, ಸ್ವಾದಿಷ್ಟಾನ, ಮಣಿಪೂರಕ ಚಕ್ರಗಳಲ್ಲಿ ಇರುವವರೆಲ್ಲರೂ ಕೂಡ ಜನಾಲೋಕದವರೆಗೆ ಸೇರಿಕೊಳ್ಳಬಲ್ಲರು. ಆದರೆ ಅಷ್ಟಕ್ಕೂ ಮೀರಿ ಹೋಗಲಾರರು. ಅಂದರೆ ಜನಾಲೋಕವನ್ನು ದಾಟಲಾರರು. ಆದರೆ ಇದಕ್ಕೆ ಮೀರಿದ ಚಕ್ರ ಸ್ಥಿತಿಯಲ್ಲಿರುವವರು ಜನಾಲೋಕವನ್ನು ದಾಟಿ ಉನ್ನತ ಲೋಕಗಳನ್ನು ಸೇರಿಕೊಳ್ಳಬಲ್ಲರು.

## "ಅನಾಹತ"

ನಂತರದ್ದೇ ಅನಾಹತ ಚಕ್ರ ಅನಾಹತ ಎಂದರೆ ನಿಶ್ಯಬ್ಧವಾಗಿದ್ದು ಸಾಧನೆ ಮಾಡಿಕೊಳ್ಳುತ್ತಾ ಇರುತ್ತಾರೆ. ಇವರಿಗೆ ಬೇರೆಯವರ ಮೊಡವೆ ಇರುವುದಿಲ್ಲ ಇವರು ವಿಶುದ್ಧ ಚಕ್ರಸ್ಥಾಯಿಗೆ ಕೂಡ ಬರುತ್ತಾರೆ.

## "ವಿಶುದ್ಧ"

ನಿಷಿದ್ಧ ಎಂದರೆ ವಿಶೇಷವಾಗಿ ಶುದ್ಧವಾಗಿರುವವರು ಅಂದರೆ ಧ್ಯಾನವನ್ನು ಚೆನ್ನಾಗಿ ಮಾಡಿ ಒಳಿತು ಕೆಡುಕು ಕರ್ಮಗಳನ್ನು ರಕ್ಷಣೆ ಮಾಡಿಕೊಳ್ಳುತ್ತಾರೆ ಅಂದರೆ ಶುದ್ಧಿ

ಮಾಡಿಕೊಳ್ಳುತ್ತಾರೆ ಎಲ್ಲಾ ಕರ್ಮಗಳನ್ನು ಶುದ್ಧವಾದಂತೆ ಇವರು ನಿಸ್ವಾರ್ಥ ಸೇವೆಗಳನ್ನು ಮಾಡುತ್ತಾರೆ ಒಂದು ವಿಧವಾಗಿ ಹೇಳಬೇಕೆಂದರೆ, ಇವರು ಪರಿ ಸಾತ್ವಿಕ ಸ್ಥಿತಿಯಲ್ಲಿ ಇರುವವರು.

ಸಾತ್ವಿಕದಲ್ಲಿ ಕೂಡ ಮೂರು ಹಂತಗಳು ಇವೆ 1. ಸಾತ್ವಿಕ 2. ಪರಿಸಾತ್ವಿಕ 3. ಮಹಾಪರಿಸಾತ್ವಿಕ

ಮಹಾ ಪರಿಸಾರ್ತಿಕತೆಯನ್ನು ಶುದ್ಧ ಸಾತ್ವಿಕ ಎಂದು ಪತಿಜಿಯವರು ಹೇಳುತ್ತಾರೆ ಅಂದರೆ ಅರ್ಥವಾಗಿ ಜೀವಿಸುತ್ತಾ ಸೇವೆಗಳು ಮಾಡುತ್ತಾ ಮರಣಿಸಿದ ನಂತರ ಜನಾಲೋಕ ದಾಟಿ ಮಹಾಲೋಕಕ್ಕೆ ಸೇರಿಕೊಳ್ಳುತ್ತಾರೆ ಅಂದರೆ ವಿಶುದ್ಧ ಚಕ್ರಸ್ಥಾಯಿಗೆ ಬಂದಿರುವವರು, ಮಹಾಲೋಕವನ್ನು ಸೇರಿಕೊಳ್ಳುತ್ತಾರೆ.

## "ಆಜ್ಞಾ"

ಆಜ್ಞಾಚಕ್ರ ಸ್ಥಿತಿ ಎಂದರೆ ಧ್ಯಾನದಲ್ಲಿ ಪರಾಕಾಷ್ಟೆಗೆ ಸೇರಿಕೊಂಡಿರುವವರು. ಕರ್ಮಗಳೆಲ್ಲವೂ ಪೂರ್ತಿಯಾಗಿ ಶುದ್ಧವಾಗುತ್ತದೆ ಇವರಿಗೆ ಎಷ್ಟೋ ಅನುಭವಗಳು ಬರುತ್ತದೆ.ಅತೀಂದ್ರಿಯ ಶಕ್ತಿಗಳನ್ನು ಹೊಂದುತ್ತಾ ಇರುತ್ತಾರೆ. ತ್ರಿಕಾಲ ಜ್ಞಾನಿಗಳು ಆಗುತ್ತಾರೆ, ತ್ರಿಲೋಕ ಸಂಚಾರಿಗಳು ಆಗುತ್ತಾರೆ, ಧ್ಯಾನದ ಮೂಲಕ ದಿವ್ಯದೃಷ್ಟಿ ಸಂಪಾದಿಸಿಕೊಳ್ಳುತ್ತಾರೆ. ಮೂರನೇ ಕಣ್ಣು ಅಂದರೆ ದಿವ್ಯಚಕ್ಷು ಈ ಚಕ್ರದಲ್ಲಿ ಉತ್ತೇಜಿತವಾಗುತ್ತದೆ. ನೆನಪಿನಲ್ಲಿಟ್ಟುಕೊಳ್ಳಿ. ಆಜ್ಞಾ ಚಕ್ರಸ್ಥಾಯಿಗೆ ಸೇರಿಕೊಂಡವರಿಗೆ ದಿವ್ಯದೃಷ್ಟಿ ಉಂಟಾಗುತ್ತದೆ ಅದರೊಂದಿಗೆ ಕಣ್ಣಿಗೆ ಕಾಣಿಸದ್ದನ್ನು ಕೂಡ ನೋಡು ಬಲ್ಲರು ಸಾಮಾನ್ಯರು ತಿಳಿದುಕೊಳ್ಳಲಾರದ ಎಷ್ಟೋ ವಿಷಯಗಳನ್ನು ತಿಳಿದುಕೊಳ್ಳುತ್ತಾರೆ. ಎಷ್ಟೋದಿವ್ಯ ಶ್ರವಣಗಳನ್ನು ಕೇಳುತ್ತಿರುತ್ತಾರೆ.

ಇಷ್ಟು ಶಕ್ತಿಗಳು ಇದ್ದರೂ, ಸಿದ್ಧಿಗಳು ಇರುವವರಿಗೆ ಸತ್ಯ ಅನುಭವಕ್ಕೆ ಬರುವುದಿಲ್ಲ ಒಂದು ವಿಧವಾಗಿ ಹೇಳಬೇಕೆಂದರೆ, ಇವರು ಮಹಾ ಪರಿಸಾತ್ವಿಕ ಗುಣದಲ್ಲಿ ಇರುವವರು ಎಂದು ಹೇಳಬಹುದು. ಅಂದರೆ ಶುದ್ಧ ಸಾತ್ವಿಕ ಗುಣದಲ್ಲಿ ಇರುವವರೆಂದು ಹೇಳಬಹುದು ಆಜ್ಞಾ ಚಕ್ರಸ್ಥಿತಿ ಅಂದರೆ, ಇವರು ಧ್ಯಾನ ಮಾಡುವುದರಿಂದ ತಪಸ್ಸು ಮಾಡುವುದರಿಂದ ತಪೋಲೋಕ ಅಂದರೆ, ಬ್ರಹ್ಮ ಲೋಕ ಸೇರಿಕೊಳ್ಳುತ್ತಾರೆ

## "ಸಹಸ್ರಾರ"

ಸಹಸ್ರಾರ ಸ್ಥಿತಿಯಲ್ಲಿ ಇರುವವರು ಒಂದು ವಿಧವಾಗಿ ಕೀಟವು ಭ್ರಮರವಾಗಿ ಬದಲಾದಂತೆಯೇ.. ಅಂದರೆ ಮಾನವನು ಮಾನವನಾಗಿ ಬದಲಾಗಿ,ಇವರು ಆಧ್ಯಾತ್ಮಿಕ

ಸೇವೆಗಳು ಮಾಡುತ್ತಾರೆ. ಇದಕ್ಕೆ ಉದಾಹರಣೆ ಪತ್ರೀಜಿಯವರು, ಇವರು ಆತ್ಮಕರ್ಮಗಳು ಮಾಡುತ್ತಾರೆ, ಆತ್ಮಸೇವೆಗಳು ಮಾಡುತ್ತಾರೆ.ಆತ್ಮಕ್ಕೆ ಪ್ರಾಮುಖ್ಯತೆ ನೀಡುತ್ತಾರೆ.ಈ ಸಹಸ್ರಾರದಲ್ಲಿ ಇರುವವರು ಆತ್ಮದ ಹೊರತು ಇನ್ನೊಂದು ಪ್ರಸ್ತಾವನೆಯ ಗೂಡವೆ ಇರುವುದಿಲ್ಲ. ಪತ್ರೀಜಿಯವರನ್ನು ನೋಡಿದರೆ ನಮಗೆ ಅರ್ಥವಾಗುತ್ತದೆ, ಎಲ್ಲರಿಗೂ ಧ್ಯಾನವನ್ನು ಬೋಧಿಸುತ್ತಾರೆ ಜ್ಞಾನವನ್ನು ನೀಡುತ್ತಾರೆ ಇವರಿಗೆ ಅದೊಂದೇ ಕೆಲಸ ಈ ಚಕ್ರ ಸ್ಥಿತಿಯಲ್ಲಿರುವವರು ನಿಧಾನವಾಗಿ ಪೂರ್ಣಾತ್ಮರಾಗುತ್ತಾರೆ ಇವರನ್ನು ಸಹ ಸೃಷ್ಟಿಕರ್ತರು ಎಂದು ಕೂಡ ಹೇಳುತ್ತಾರೆ. ಅಂದರೆ ಈ ಸಹಸ್ರಾರ ಸ್ಥಿತಿಯಲ್ಲಿ ಇರುವವರು ಜ್ಞಾನದ ಮೂಲಕ ಸತ್ಯವನ್ನು ಅನುಭವಕ್ಕೆ ತಂದುಕೊಳ್ಳುತ್ತಾರೆ. ಆದ್ದರಿಂದ ಇವರು ಸತ್ಯ ಲೋಕ ಸೇರಿಕೊಳ್ಳುತ್ತಾರೆ.

ನೀವು ಎಷ್ಟು ಹೆಚ್ಚು, ನಾನು ಆತ್ಮಪದಾರ್ಥ ಅನ್ನುವರೀತಿಯಲ್ಲಿ ಜೀವಿಸಿದರೆ,ನೀವು ಅಷ್ಟು ಅಭಿವೃದ್ಧಿ ಆಗುವಿರಿ.ನಿಮ್ಮ ಜ್ಞಾನ ಅಷ್ಟು ಹೆಚ್ಚಾದಂತೆ ಲೆಕ್ಕ. ಆದ್ದರಿಂದ ಮೊದಲು ನೀವು ಆತ್ಮವನ್ನು ಗಮನಿಸಿಕೊಳ್ಳಿ.

ಪತ್ರೀಜಿಯವರು ಏನು ಹೇಳುತ್ತಾರೆಂದರೆ, ನೀವು ಆತ್ಮ ಎನ್ನುವಂತೆ 50%, ದೇಹ ಎನ್ನುವಂತೆ 50% ಜೀವಿಸಿರಿ ಎನ್ನುತ್ತಾರೆ. ಹಾಗೆಯೇ ನಿಧಾನವಾಗಿ ನಾನು ಆತ್ಮ ಎಂದು 60% ದೇಹ ಎಂದು 40% ಹೆಚ್ಚಿಸಿಕೊಳ್ಳಬೇಕು. ನಿಮ್ಮ ಸಾಧನೆ ಹಚ್ಚಿದರೆ ಆತ್ಮವಾಗಿ 70% , ದೇಹವಾಗಿ 30% ಜೀವಿಸುತ್ತಾ ....ಕೊನೆಗೆ ನಾನೇ ಆತ್ಮ ಎಂದು 90 %...ಕೊನೆಗೆ 100% ಪರ್ಸೆಂಟ್ ಆತ್ಮ ನಾನೇ ಎನ್ನುವಂತೆ..., ಪತ್ರೀಜಿಯವರಂತೆ ಜೀವಿಸಿದರೆ ನೀವು ಸಹಸ್ರಾರ ಸ್ಥಿತಿಯಲ್ಲಿ ಇರುವಂತ ಲೆಕ್ಕ.

ಆದ್ದರಿಂದ ನೆನಪಿನಲ್ಲಿ ಇಟ್ಟುಕೊಳ್ಳಿ, 'ಚಕ್ರ' ಎಂದರೆ 'ಭ್ರಮಣ' ಎಂದು ತಿಳಿದುಕೊಳ್ಳಬೇಕು, ಮಾನವನು ತನ್ನ ಜನ್ಮಗಳನ್ನು ಪ್ರತಿ ಚಕ್ರ ಸ್ಥಿತಿಯಲ್ಲಿ ಜೀವಿಸುತ್ತಿರುತ್ತಾನೆ. ಮರಣಿಸುತ್ತಾ ಇರುತ್ತಾನೆ. ಮತ್ತೆ ಜನಿಸುತ್ತಾ ಇರುತ್ತಾನೆ. ಹಾಗೆ ಚಕ್ರದಂತೆ ತಿರುಗುತ್ತಾ ಪುನರಪಿ ಜನನಂ ಪುನರಪಿ ಮರಣಂ ಎನ್ನುವಂತೆ ಜೀವನ ಸಾಗುತ್ತದೆ. ಕೊನೆಗೆ ಚಕ್ರಾತೀತ ಸ್ಥಿತಿ ಅಂದರೆ ಸಹಸ್ರಾರ ಸ್ಥಿತಿಗೆ ಸೇರಿಕೊಳ್ಳುತ್ತಾನೆ. ಅಂದರೆ ಅವನು ಮತ್ತೆ ಭೂಮಿ ಮೇಲೆ ಬರುವುದಿಲ್ಲ. ಅಂದರೆ, ಅವರಿಗೆ ಜನ್ಮಗಳು ಇರುವುದಿಲ್ಲ ಎಂದು ತಿಳಿದುಕೊಳ್ಳಬೇಕು.

ಆದ್ದರಿಂದ ಆಜ್ಞಾ ಚಕ್ರದವರೆಗೆ ಬಂದರೂ ಕೂಡ ಮತ್ತೆ ಭೂಮಿ ಮೇಲೆ ಜನ್ಮ ತಿಳಿದುಕೊಳ್ಳಲೇಬೇಕು. ಅಂದರೆ ಚಕ್ರಗಳಲ್ಲಿ ಇರುವವರು ಭ್ರಮಣದಲ್ಲೇ ಇರುತ್ತಾರೆ.ಆದ್ದರಿಂದ ನೆನಪಿಡಿ ಸುಮ್ಮನೆ ಸ್ವಲ್ಪ ಹೊತ್ತು ಧ್ಯಾನ ಮಾಡಿದರೆ ನಿಮ್ಮ ಚಕ್ರ

ಉತ್ತೇಜಿತವಾಗುವುದಿ ಲ್ಲ ಅದಕ್ಕೆ ಎಷ್ಟೋ ಜನ್ಮಗಳು ಹಿಡಿಯುತ್ತದೆ. ನಿಮ್ಮ ಅಭಿವೃದ್ಧಿ ನಿಮ್ಮ ಪ್ರವರ್ತನೆಯ ಅನುಸಾರ ಇರುತ್ತದೆ. ಏನೋ ನೆತ್ತಿಯ ಮೇಲೆ ಸರಿದಾಡಿದಂತೆ ಆದರೆ ಚಕ್ರ ಆಕ್ಟಿವೇಟ್ ಆಗಿದೆಯೆಂದು ಅರ್ಥವಲ್ಲ. ಯಾವುದು ಏನಾದರೂ ನಮ್ಮ ಸ್ಥಾಯಿ ನಾವು ಮಾಡುವ ಕೆಲಸಗಳ ಅನುಸಾರ ಮಾಡುವ ಸೇವೆಗಳ ಅನುಸಾರವಾಗಿ ಇರುತ್ತದೆ.

ಅದಕ್ಕೆ ಪತ್ರೀಜಿಯವರು ಆತ್ಮ ಸೇವೆಗಳು ಮಾಡಲು ಹೇಳುತ್ತಾರೆ. ಏಕೆಂದರೆ ಕಣ್ಣಿಗೆ ಕಾಣಿಸುವುದು ಕೊಟ್ಟರೆ ನೀವು ವಿಶುದ್ಧ ಚಕ್ರದಲ್ಲಿ ಸೇರಿಕೊಂಡವರು ಎಂದು ತಿಳಿದುಕೊಳ್ಳಿ. ಹಣ ದಾನ ಅನ್ನದಾನ ವಸ್ತ್ರದಾನ ಇಂತವು ವಿಶೇಷವಾಗಿ ಮಾಡುತ್ತಿದ್ದೀರಿ ಎಂದರೆ ವಿಶಿಷ್ಟ ಚಕ್ರಸ್ಥಾಯಿಗೆ ಸೇರಿಕೊಂಡಂತೆ ಅಂದರೆ ಮಹಾಲೋಕಕ್ಕೆ ಹೋಗಬಲ್ಲಿರಿ.

ಆದರೆ ಕಣ್ಣಿಗೆ ಕಾಣಿಸದ ಅಂದರೆ ಆತ್ಮಜ್ಞಾನ ನೀಡಿದರೆ, ಅಜ್ಞಾಚಕ್ರ ಸ್ಥಾಯಿ ಸೇರಿಕೊಂಡಿರುವಿರಿ ಎಂದರ್ಥ.. ಅಂತಹವರು ತಪೋಲೋಕ ಸೇರಿಕೊಳ್ಳುತ್ತಾರೆ.

ಹಾಗೆ ನಿಧಾನವಾಗಿ ಸತ್ಯವನ್ನು ಅಂದರೆ ಆತ್ಮವನ್ನು ಅನುಭವಕ್ಕೆ ತಂದುಕೊಂಡರೆ, ನಾನು ಆತ್ಮ ಎನ್ನುವಂತೆ ಜೀವಿಸಿ ಸಹಸ್ರಾರ ಸ್ಥಿತಿಗೆ ಸೇರಿದ್ದೀರಿ ಎಂದು ಅರ್ಥ. ಅವರು ಸತ್ಯಲೋಕ ಸೇರಿಕೊಳ್ಳುತ್ತಾರೆ. ಯಾವ ಕೆಲಮಾಡಿದರು ಆತ್ಮಪರವಾಗಿ ಇರುತ್ತದೆ. ಆತ್ಮಕ್ಕೆ ಲಾಭಕ್ಕೆ ಉಂಟು ಮಾಡುವ ವಿಧವಾಗಿಯೇ ಇರುತ್ತದೆ.

ಆದ್ದರಿಂದ ಪ್ರತಿಯೊಬ್ಬರೂ ಆಧ್ಯಾತ್ಮಿಕವಾಗಿ ಅಭಿವೃದ್ಧಿಯಾಗಬೇಕು ಅದಕ್ಕೆ ಭೀಮವರಂ ಕ್ಲಾಸಿಗೆ ಬರಬೇಕು. ಆತ್ಮಜ್ಞಾನಿಗಳು ಆಗಬೇಕು.

ಹಾಗಾಗಿ ತಿಳಿದುಕೊಳ್ಳಿ ಮೊಟ್ಟಮೊದಲು ಮೂರು ಚಕ್ರಗಳವರೆಗೂ ಅಂದರೆ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರಕಗಳಲ್ಲಿ ಇರುವವರು ಜನಾ ಲೋಕದ ಕೆಳಗೆ ಇರುತ್ತಾರೆ.ಆದರೆ ವಿಶುದ್ಧ ಚಕ್ರ ಸ್ಥಿತಿಗೆ ಸೇರಿಕೊಂಡವರು, ಮಹಾಲೋಕ ಸೇರಿಕೊಳ್ಳುತ್ತಾರೆ, ಆಜ್ಞಾಚಕ್ರ ಸ್ಥಿತಿಗೆ ಸೇರಿಕೊಂಡವರು ತಪೋಲೋಕ ಸೇರಿಕೊಳ್ಳುತ್ತಾರೆ. ಸಹಸ್ರಾರ ಸ್ಥಿತಿಗೆ ಸೇರಿಕೊಂಡವರು ಸತ್ಯ ಲೋಕ ಸೇರಿಕೊಳ್ಳುತ್ತಾರೆ ಎಂದು ತಿಳಿದುಕೊಳ್ಳಬೇಕು.

## ನಾನು ಯಾರು?

ಮರಣಿಸುವುದು ಎಂದರೆ ದೇಹವನ್ನು ತ್ಯಜಿಸುವುದು. ಎಷ್ಟು ವಿಚಿತ್ರ ಎಂದರೆ, ಅಲ್ಲಿಯವರೆಗೂ ನಾನು ಎಂದು ಭಾವಿಸಿದ ದೇಹವನ್ನು ಬಿಟ್ಟು ಬಿಡುವುದು. ಆ ದೇಹವೇ 'ನಾನು' ಅದೇ ಶಾಶ್ವತ ಎಂದು ದೇಹಕ್ಕೆ ಎಷ್ಟು ಪ್ರಾಮುಖ್ಯತೆ ನೀಡಿದರೂ,ಕೊನೆಗೆ ಆ

ದೇಹವನ್ನು ಬಿಡಲೇಬೇಕು. ಆ ದೇಹವೇ ನಾನು ಎಂದುಕೊಳ್ಳುತ್ತಾ ಆ ದೇಹಕ್ಕಾಗಿ ಎಷ್ಟು ಕಷ್ಟಪಡುತ್ತಾರೆ ಎಷ್ಟು ಸಂಪಾದಿಸುತ್ತಾರೆ. ಎಷ್ಟು ಹೊಂದಿಸಿಕೊಳ್ಳುತ್ತಾರೆ. ಅಷ್ಟೇ ಅಲ್ಲ ಅವೆಲ್ಲ ಸಂಪಾದಿಸಲು ಎಷ್ಟೋ ತಪ್ಪುಗಳು ಮಾಡುತ್ತಾರೆ, ಪಾಪಗಳು ಮಾಡುತ್ತಾರೆ, ಮಾಡಬಾರದ ಕೆಲಸಗಳನ್ನು ಮಾಡುತ್ತಾರೆ.ಮತ್ತೆ ಇವೆಲ್ಲಾ ಪಾಪಗಳು ಏಕೆ ಮೂಟೆ ಕಟ್ಟಿಕೊಳ್ಳುತ್ತಿದ್ದಾರೆ ಎಂದರೆ ದೇಹಕ್ಕಾಗಿ ಅಲ್ಲವೇ.

ಇಷ್ಟು ಪಾಪಗಳು ಆ ದೇಹಕ್ಕಾಗಿ ಸಂಗ್ರಹಿಸಿಕೊಂಡು ಕೊನೆಗೆ ಆ ದೇಹವನ್ನು ಬಿಡುತ್ತಿದ್ದಾರೆ. ಕೊನೆಗೆ ಆ ದೇಹವು ಸುಟ್ಟು ಬೂದಿಯಾಗುತ್ತದೆ. ಆದರೆ ದೇಹಕ್ಕಾಗಿ ಮಾಡಿದ ಪಾಪಗಳು ಮಾತ್ರ ಹಿಂದೆ ಬರುತ್ತವೆ. ಎಷ್ಟು ವಿಚಿತ್ರ ನೋಡಿ ದೇಹವನ್ನು ಸುಖಪಡಿಸುವುದಕ್ಕಾಗಿ ಅಂದವಾಗಿ ಅಲಂಕರಿಸಿಕೊಳ್ಳುವುದಕ್ಕಾಗಿ, ಪ್ರದರ್ಶಿಸಿಕೊಳ್ಳುವುದಕ್ಕಾಗಿ, ಎಷ್ಟು ಕಷ್ಟಪಡುತ್ತಾರೆ.ಅಷ್ಟೇ ಅಲ್ಲ ನಾನು ಇಷ್ಟು ಅಂದವಾಗಿದ್ದೇನೆ ಎನ್ನುತ್ತಾರೆ. ಅದೇ ತಾನು ಎನ್ನುತ್ತಾರೆ. ಗಂಡಸರಾದರೆ ಸೂಟು ಬೂಟು ಹಾಕಿಕೊಳ್ಳುತ್ತಾರೆ. ಹೆಂಗಸರು ರೇಷ್ಮೆ ಸೀರೆ ಹಾಕಿಕೊಂಡು ಕನ್ನಡಿಯ ಮುಂದೆ ನಿಂತು ಎಷ್ಟು ಹೊತ್ತಾದ್ರೂ ಆಚೆ ಬರುವುದಿಲ್ಲ. ಪ್ರದರ್ಶನ ಮಾಡಬೇಕಲ್ಲವೇ? ಎಷ್ಟು ವಿಧವಾಗಿ ಅಲಂಕರಿಸಿಕೊಳ್ಳುತ್ತಾರೋ..., ಮೇಲಿನಿಂದ ಕೆಳಗಿನವರೆಗೂ ಮ್ಯಾಚಿಂಗ್ ಇರಬೇಕು ಬೆರಳಿಗೆ ಬಣ್ಣದಿಂದ , ಹಿಡಿದು ಎಲ್ಲೂ ವ್ಯತ್ಯಾಸವಾಗಬಾರದು, ತುಟಿಗಳಿಗೆ ಕೂಡಾ ಅಷ್ಟೇ.

ಏಕೆ ಮಾಮೂಲಿಯಾಗಿದ್ದರೆ ಸರಿ ಹೋಗದೆ, ಹುಬ್ಬುಗಳು ತೀಡಿಕೊಂಡು...ಹೀಗೆ ಒಂದು, ಒಂದೂವರೆ ಗಂಟೆ ಕನ್ನಡಿಯಿಂದ ಹೊರಗೆ ಬರುವುದಿಲ್ಲ. ಕೂದಲಿನಲ್ಲಿ ಏನಾದರೂ ಲೋಪವಿದ್ದರೆ ಮತ್ತೆ ವಿಗ್ಗು ಇಟ್ಟುಕೊಳ್ಳುತ್ತಾರೆ. ಇಲ್ಲದಿದ್ದರೆ ಬಣ್ಣಗಳು ಹಾಕುತ್ತಾರೆ. 'ಅದಕ್ಕೆ' ಎಷ್ಟು ಅಲಂಕಾರ ಮಾಡುತ್ತಾರೋ.. ಯಾವುದಕ್ಕೆ? ಎಂದರೆ ಈ ದೇಹಕ್ಕೆ...ಏಕೆ ಎಂದರೆ ನಾನು ಎನ್ನುವ ಭಾವದೊಂದಿಗೆ ಕೊನೆಗೆ ದೇಹ ಇರುವುದೇ ಎಂದರೆ ಇರುವುದಿಲ್ಲ ಎಷ್ಟು ವಿಚಿತ್ರ ಅದಕ್ಕೆ ಒಂದು ಹೆಸರಿಟ್ಟುಕೊಂಡು ಸಂತೋಷ ಪಡುತ್ತಾರೆ ಯಾರಾದರೂ ಹೆಸರಿನಿಂದ ಹೊಗಳಿದರೆ ಉಬ್ಬುತ್ತಾರೆ. ವಿಮರ್ಶಿಸಿದರೆ ತುಂಬಾ ಬಾಧೆ ಪಡುತ್ತಾರೆ. ಬೈದರೆ ಸ್ಥಿಮಿತ ಇರುವುದಿಲ್ಲ. ಹಿಂತಿರುಗಿ ನಾಲ್ಕು ಮಾತು ಇವರು ಬೈಯ್ಯದೇ ಹೋದರೆ,ಮನಶಾಂತಿ ಇರುವುದಿಲ್ಲ.

ಈ ದೇಹ ನೋಡಿಕೊಳ್ಳುತ್ತಾ ಅವರು ಬೇರೆ, ನಾನು ಬೇರೆ ಎಂದು ಭಾವಿಸುತ್ತಾ ಅವರನ್ನು ದ್ವೇಷಿಸುವುದರಿಂದ ಅವರೊಂದಿಗೆ ಶತ್ರುತ್ವ ಹೆಚ್ಚಿಸಿಕೊಳ್ಳುವುದು ಕಕ್ಷೆ ಸಾಧಿಸುವುದು ಇವೆಲ್ಲ ಏಕೆ ನಡೆಯುತ್ತಿದೆ? ಈ ದೇಹವನ್ನು ನೋಡಿಕೊಂಡೆ ತಾನೇ ನಿನ್ನೊಂದಿಗೆ ಆತ್ಮದೊಂದಿಗೆ ಈ ದೇಹ ಚಿರ ಕಾಲ ಇರುವುದೇ? ಇರುವುದಿಲ್ಲ ಕೊನೆಗೆ

ದೇಹವನ್ನು ಬಿಡಬೇಕಾಗುತ್ತದೆ. ಆಲೋಚಿಸಿ...! ಶಾಶ್ವತವಾಗಿ ಇರದ ದೇಹಕ್ಕಾಗಿ ಇಷ್ಟು ಹಾರಾಟವೇಕೆ?

ಅದಕ್ಕೇ ಧರ್ಮರಾಜನನ್ನು ಯಕ್ಷನು "ಎಲ್ಲದಕ್ಕಿಂತ ವಿಚಿತ್ರವಾದದ್ದು ಯಾವುದು"? ಎಂದು ಪ್ರಶ್ನೆಸಿದಾಗ, ಧರ್ಮರಾಜನು, "ತಮ್ಮ ಮೇಲಿನವರು ಎಷ್ಟೋ ಜನರು ಹೋಗುವುದನ್ನು ನೋಡುತ್ತಿದ್ದರು,ತಾನು ಮಾತ್ರ ಶಾಶ್ವತವಾಗಿ ಇರುವೆನೆಂಬ ಭ್ರಮೆಯಲ್ಲಿ ಜೀವಿಸುತ್ತಾ ಇರುತ್ತಾರೆ. ಇದೇ ನನಗೆ ಆಶ್ಚರ್ಯ ಉಂಟುಮಾಡುವ ವಿಷಯ" ಎನ್ನುತ್ತಾನೆ. ಹೌದು ಇದು ಆಶ್ಚರ್ಯಕರ ವಿಷಯ ಅಲ್ಲವೇ?

ನಾವು ಕೂಡ ದಿನವೂ ಟಿವಿಯಲ್ಲಿ ಪೇಪರ್ ನಲ್ಲಿ ನೋಡುತ್ತಿದ್ದೇವೆ, ಕೇಳುತ್ತಿದ್ದೇವೆ.ಇವರು ಹೋದರು ಅವರು ಹೋದರು ಎಂದು ಮಾತನಾಡಿಕೊಳ್ಳುತ್ತೇವೆ...ನಾವೇನೋ ಶಾಶ್ವತವಾಗಿ ಇರುವವರು ಎಂದುಕೊಳ್ಳುತ್ತೇವೆ. ಗಮನಿಸಿ ವಯಸ್ಸಾದರೆ ಸಾಯುತ್ತಾರೆ ಎಂದುಕೊಳ್ಳುತ್ತೇವೆ ಆದರೆ ಯೌವ್ವನದಲ್ಲಿ ಇರುವವರು ಇನ್ನೂ ಚಿಕ್ಕ ವಯಸ್ಸಿನವರು ಕೂಡಾ ಹೋಗುತ್ತಿದ್ದಾರೆ. ಯಾರು ಯಾವಾಗ ಹೋಗುವರು? ಯಾರಿಗೂ ತಿಳಿಯದು, ಇದು ಪ್ರತಿಯೊಬ್ಬರೂ ನೆನಪಿನಲ್ಲಿಟ್ಟುಕೊಳ್ಳಬೇಕು.

ತ್ಯಜಿಸುವ ದೇಹಕ್ಕಾಗಿ ಪ್ರತಿಯೊಬ್ಬರಿಗೂ ಎಷ್ಟು ಹಾರಾಟ ಎನ್ನುವುದನ್ನು ಆಲೋಚಿಸಿ.ಹಾಗಾದರೆ ನಾವು ಈಗ ಏನು ಮಾಡಬೇಕು?

ಏನು ಮಾಡಬೇಕು? ಎಂದರೆ ರಮಣ ಮಹರ್ಷಿ ಹೇಳಿದಂತೆ ಯಾರಾದರೂ ಸರಿಯೇ ಮೊದಲು ನಾವು ಯಾರು ಎಂದು ತಿಳಿದುಕೊಳ್ಳಬೇಕು. ಇದು ತಿಳಿದುಕೊಳ್ಳದಿದ್ದರೆ ನಿಮ್ಮ ಜೀವನ ವ್ಯರ್ಥ. ನೀವು ಏನು ಮಾಡಿದರೂ ವ್ಯರ್ಥ, ಏನು ಸಾಧಿಸಿದರು ವ್ಯರ್ಥ, ಎಷ್ಟು ಸಂಪಾದಿಸಿದರು ವ್ಯರ್ಥ.

ಆದ್ದರಿಂದ ಮೊದಲು ನೀನು ಯಾರೋ ತಿಳಿದುಕೊಳ್ಳಬೇಕು. ಇದೇ ಪತ್ರಿಜೀ ಅವರು ಕೂಡ ಹೇಳುತ್ತಾ ಇರುತ್ತಾರೆ.ಇದು ಅರ್ಥ ಆಗಲೆಂದೆ ಪತ್ರೀಜಿಯವರು "ಮರಣಿಸದ ಮೊದಲೇ ಮರಣಿಸಬೇಕು" ಎಂದಿದ್ದಾರೆ.

ಯಾರಾದರೂ ಮರಣಿಸುತ್ತಾರೆ... ಆದರೆ ಅದಕ್ಕಿಂತ ಮೊದಲೇ ಮರಣಿಸಬೇಕು ಅಂದರೆ ಮರಣಿಸಿದ ನಂತರ ಏನು ನಡೆಯುವುದು ಎಂದು ಮರಣಿಸುವ ಮೊದಲೇ ತಿಳಿದುಕೊಳ್ಳಬೇಕು ಎಂದು ಪತ್ರೀಜಿಯವರು ಹೇಳಿದ್ದಾರೆ. ಪ್ರತಿಯೊಬ್ಬರಿಗೂ ಈ ದೇಹ ತ್ಯಜಿಸುತ್ತೇವೆ ಎಂದು ತಿಳಿದಿದೆ ಅಂದ್ರೆ ಸಾಯುತ್ತೇವೆ ಎಂದು ತಿಳಿದಿದೆ. ಆಗ ಈ

ದೇಹವನ್ನು ಸುಡುತ್ತಾರೆ ಅಥವಾ ಹೂಳುತ್ತಾರೆ ಆದರೆ ದೇಹ ಸುಟ್ಟರು, ಹೂತು ಹಾಕಿದರು, ನೀವು ಅಂದರೆ,ಆತ್ಮ ಇರುವುದೆನ್ನುವ ವಿಷಯ ತಿಳಿದುಕೊಳ್ಳಬೇಕು.

ಈ ವಿಷಯ ಎಷ್ಟು ಅವಾಗಾಹನೆಯಲ್ಲಿ ಇದ್ದರೆ ನೀವು ಜೀವನದಲ್ಲಿ ಅಷ್ಟು ಲಾಭ ಹೊಂದುವಿರಿ ಅದಕ್ಕೆ ಮರಣಿಸಿದ ನಂತರ ಏನು ನಡೆಯುವುದು ಎಂದು ನಾನು ಹೇಳುವುದು ನಡೆದಿದೆ.

ಏಕೆಂದರೆ ಈ ದೇಹ ಎನ್ನುವುದು ನಮಗೆ ಆ ಪರಮಾತ್ಮ,ಅಂದರೆ ಆ ಸೃಷ್ಟಿಕರ್ತ ನೀಡಿದ ಉಪಕರಣ ಮಾತ್ರವೇ. ಇದನ್ನು ಉಪಯೋಗಿಸಿಕೊಳ್ಳಲು ಮಾತ್ರ ನಮಗೆ ನೀಡಲಾಗಿದೆ. ಈ ದೇಹವೇ ನಾನು ಎಂದು ಭಾವಿಸಿಕೊಳ್ಳಲು ಅಲ್ಲ. ಇದನ್ನು ಒಬ್ಬ ವೇಮನನಂತೆ, ರಮಣ ಮಹರ್ಷಿಯಂತೇ, ವಿವೇಕಾನಂದರಂತೆ, ಬುದ್ಧನಂತೆ ಉಪಯೋಗಿಸಿಕೊಳ್ಳಬೇಕು.ಹಾಗೆ ಉಪಯೋಗಿಸಿಕೊಳ್ಳಲು ಕೊಡಲಾಗಿದೆ ಎಂದು ಮೊದಲು ತಿಳಿದುಕೊಳ್ಳಬೇಕು. ಅಷ್ಟೇ ಹೊರತು ಈ ದೇಹವೇ ನಾನು ಅಂದುಕೊಂಡರೆ ನೀನು ತಪ್ಪು ಮಾಡಿದಂತೆ.

ಅದಕ್ಕೆ ಹಿರಿಯರು ಈ ಉಪಮಾನವನ್ನು ಹೇಳುತ್ತಾರೆ "ಕಣಜದಲ್ಲಿ ಇರಿಸಿದ ಧಾನ್ಯವನ್ನು ಉಪಯೋಗಿಸದಿದ್ದರೆ ಕೆಲಸಕ್ಕೆ ಬರದೆ ಆಗುತ್ತದೆ ಎಂದು ಹೇಳುತ್ತಾರೆ. ಹಾಗೇ, ನಮಗೆ ಕೊಡಲ್ಪಟ್ಟ ಶರೀರವನ್ನು ಧ್ಯಾನಕ್ಕೆ, ಜ್ಞಾನ ಸಂಪಾದನೆಗೆ ಉಪಯೋಗಿಸದಿದ್ದರೆ, ಮುದಿಯಾಗಿ ಕೆಲಸಕ್ಕೆ ಬಾರದೆ ಹೋಗುತ್ತದೆ" ಅಂತ ಹೇಳಿದ್ದಾನೆ.

ಇನ್ನು ಏನು ಹೇಳಿದ್ದಾರೆ ಎಂದರೆ:

**"ಭೌತಿಕ ಶರೀರವನ್ನು ಕೆಲಸಕ್ಕೆ ಬರದ ಪರಿಕರವಾಗಿ ತಯಾರು ಮಾಡಿಕೊಳ್ಳಬಾರದು. ಅಂದರೆ ಈ ಶರೀರವನ್ನು ಜೀವನ ಪರ್ಯಂತ ಉಪಯೋಗಿಸಿಕೊಂಡರೂ, ಪರಲೋಕಗಳಲ್ಲಿ ಆತ್ಮಕ್ಕೆ ಸ್ವಲ್ಪವೂ ಉಪಯೋಗ ವಾಗದಿದ್ದರೆ, ಈ ಭೌತಿಕ ಶರೀರ ಕೆಲಸಕ್ಕೆ ಬಾರದ ಪರಿಕರವೇ"** ಎನ್ನುತ್ತಾರೆ.

ಈ ವಿಷಯವಾಗಿ ಮಾಣಿಕೇಶ್ವರಿ ಮಾತಾ ಏನು ಹೇಳಿದ್ದಾರೆ ಎಂದರೆ

**"ನಿಮ್ಮ ಭೌತಿಕ ಶರೀರವನ್ನು ನಿಮಗೆ ಕೊಡಲ್ಪಟ್ಟ ಬಹುಮಾನವಾಗಿ ಭಾವಿಸಿರಿ"** ಅದನ್ನು ಕೆಲಸಕ್ಕೆ ಬಾರದ ಕೆಲಸಗಳಿಗೆ ಉಪಯೋಗಿಸಬೇಡಿ ನಿಮಗೂ ಅಂದರೆ ಆತ್ಮಕ್ಕೆ ಲಾಭ ಉಂಟು ಮಾಡುವ ಕೆಲಸಗಳನ್ನು ಮಾಡಿಸಿ ಎಂದಿದ್ದಾರೆ

ಅಷ್ಟೇ ಅಲ್ಲ ಮಹರ್ಷಿಗಳು ಏನು ಹೇಳಿದ್ದಾರೆ ಎಂದರೆ **"ಆತ್ಮವನ್ನು ನಿರ್ಲಕ್ಷ ಮಾಡಿದವರು ಆತ್ಮಹಂತಕರು ಆಗುತ್ತಾರೆ"** ಎಂದಿದ್ದಾರೆ

ಆದ್ದರಿಂದ ಈ ಉಪಕರಣವನ್ನು ನಾವು ಜಾಗೃತೆಯಿಂದ ಉಪಯೋಗಿಸಿಕೊಳ್ಳಬೇಕೆಂದರೆ, ಇದಕ್ಕೆ ಬೇಕಾದ ಅಗತ್ಯಗಳು ಇರುತ್ತವೆ ಆದ್ದರಿಂದ ದೇಹದ ಅಗತ್ಯಗಳು ತೀರಿಸುವ ಪ್ರಯತ್ನ ಮಾಡಬೇಕು. ಅಂದರೆ ಸಮಯಕ್ಕೆ ಊಟ ದೇಹಕ್ಕೆ ಬೇಕಾದ ಬಟ್ಟೆ ಅದಕ್ಕೆ ಬೇಕಾದಂತಹ ಮನೆ ಎಲ್ಲವನ್ನು ಹೊಂದಿಸಿಕೊಳ್ಳಬೇಕು. ಅಷ್ಟೇ ಅಲ್ಲ ಅದರೊಂದಿಗೆ ಒಬ್ಬ ಜೊತೆಗಾತಿ ಅಥವಾ ಜೊತೆಗಾರ ಅಂದರೆ ಪುರುಷನಿಗೆ ಸ್ತ್ರೀ. ಸ್ತ್ರೀಗೆ ಪುರುಷ ಇರಬೇಕು... ಜಾಗ್ರತೆಯಿಂದ ನೋಡಿಕೊಳ್ಳುತ್ತಾ ಪೋಷಿಸಿಕೊಳ್ಳುತ್ತಾ ನಿನ್ನ ಅಂದರೆ ಆತ್ಮದ ಉನ್ನತಿಗೆ ಹೋರಾಡಬೇಕು. ಅಷ್ಟೇ ಹೊರತು ದೇಹವೇ ನಾನು ನಾನು ಶಾಶ್ವತವಾಗಿ ಇಲ್ಲಿಯೇ ಇರುತ್ತೇನೆ ಎನ್ನುವ ಭ್ರಮೆಗೆ ಒಳಗಾಗಬಾರದು.

ಅದಕ್ಕೆ ಪತ್ರೀಜಿಯವರು ಪದೇ ಪದೇ ನೆನಪಿಸುತ್ತಾರೆ. ಕಾರಣ ಅದು ತುಂಬಾ ಮುಖ್ಯವಾಗಿದ್ದರಿಂದ ಆದ್ದರಿಂದ ನಾವು ಈ ದೇಹವನ್ನು ಏಕೆ ತೆಗೆದುಕೊಂಡಿದ್ದೇವೆ?ಏಕೆ ಭೂಮಿ ಮೇಲೆ ಬಂದಿದ್ದೇವೆ ಎನ್ನುವುದು ತಿಳಿದುಕೊಳ್ಳಬೇಕು. ನಾವು ಈ ವಿಷಯಗಳು ತಿಳಿದುಕೊಳ್ಳುತ್ತಾ ,ಈ ಜ್ಞಾನವನ್ನು ಸಂಪಾದಿಸಿಕೊಂಡರೆ ಅರ್ಥವಾಗುತ್ತದೆ. ಹೊಸಬರಿಗೆ ಇದು ತಿಳಿಯುವುದಿಲ್ಲ. ಆದ್ದರಿಂದ ಆತ್ಮ ನಾನೇ ಎನ್ನುವುದು ಅರ್ಥಮಾಡಿಕೊಳ್ಳಿ.

ಹಾಗೆಯೇ ಶಾಸ್ತ್ರಗಳು ಏನು ಹೇಳಿವೆ ಅದನ್ನು ಅನುಸರಿಸಬೇಕು. ಅದೇ ಅಲ್ಲವೇ ಪತ್ರಿಜಿಯವರು ಹೇಳುತ್ತಿದ್ದಾರೆ

ವಶಿಷ್ಠರು ಹೇಳಿದ್ದಾರೆ. ಭಗವದ್ಗೀತೆಯಲ್ಲಿ ಹೇಳಲಾಗಿದೆ. ಈ ಸೃಷ್ಟಿ ಎನ್ನುವುದು ಪರಮಾತ್ಮನದು ಎನ್ನುವ ವಿಷಯ ನಾವು ತಿಳಿದುಕೊಳ್ಳಬೇಕು ಸತ್ತು ಹೋದ ನಂತರ ಅಂದರೆ ದೇಹ ತ್ಯಜಿಸಿದ ನಂತರ ಆತ್ಮ ಏನಾಗುತ್ತದೆ ಎಂದು ತಿಳಿದುಕೊಳ್ಳಬೇಕು.

ನಾನು ಯಾವಾಗಲೂ ಮೂರು ಅಂಶಗಳನ್ನು ಹೇಳುತ್ತಾ ಇರುತ್ತೇನೆ.. ನಾವು ಎಲ್ಲಿದ್ದೇವೆ? ಅಂದರೆ ಈ ಸೃಷ್ಟಿಯಲ್ಲಿ ಇದ್ದೇವೆ ಅಷ್ಟೇ ಹೊರತು ಈ ಊರಿನಲ್ಲಿ,ಈ ರಾಜ್ಯದಲ್ಲಿ, ದೇಶದಲ್ಲಿ,ಈ ಭೂಮಿ ಮೇಲೆ ಅಲ್ಲ.ಈ ಸೃಷ್ಟಿಯಲ್ಲಿ ಇದ್ದೇವೆ ಎನ್ನುವ ವಿಷಯವನ್ನು ತಿಳಿದುಕೊಳ್ಳಬೇಕು.

ಮತ್ತೊಂದನ್ನು ಕೂಡ ನೆನಪಿನಲ್ಲಿಟ್ಟುಕೊಳ್ಳಬೇಕು. ಈ ಸೃಷ್ಟಿಯನ್ನು ಸೃಷ್ಟಿ ಮಾಡಿದ ಸೃಷ್ಟಿಕರ್ತ ಒಬ್ಬ ಇದ್ದಾನೆ...ಇದು ಕೂಡ ನಾವು ಮರೆತು ಹೋಗಬಾರದು

ಮೂರನೆಯ ಪಾಯಿಂಟ್ ಏನೆಂದರೆ, ಈ ಸೃಷ್ಟಿ ಸರಾಗವಾಗಿ ನಡೆಯಲು ಆ ಸೃಷ್ಟಿಕರ್ತ ಕೆಲವು ನಿಯಮಗಳು ಅಂದರೆ ಧರ್ಮಗಳು, ಸಿದ್ಧಾಂತಗಳನ್ನು ಏರ್ಪಾಟು ಮಾಡಿದ್ದಾನೆ. ಅದಕ್ಕೆ ಅನುಗುಣವಾಗಿ ನಾವು ಜೀವಿಸಬೇಕು ಎನ್ನುವುದು ಕೂಡ ತಿಳಿದುಕೊಳ್ಳಬೇಕು. ಈ ಮೂರನ್ನು ನಾವು ಯಾವಾಗಲೂ ಮರೆತು ಹೋಗಬಾರದು.

ಈ ದೇಹ ನಮಗೆ ಕೊಡಲ್ಪಟ್ಟ ಒಂದು ಉಪಕರಣ ಮಾತ್ರವೇ ಕಾರಣ ನಾವು ಆತ್ಮರು, ನಾವು ರೂಪವಿಲ್ಲದೆ ಮೊದಲು ತಾಯಿ ಗರ್ಭದಲ್ಲಿ ಪ್ರವೇಶಿಸಿದ್ದೇವೆ. ನವ ಮಾಸಗಳು ಪೂರ್ಣವಾದ ನಂತರ ರೂಪದೊಂದಿಗೆ ಭೂಮಿಯ ಮೇಲೆ ಬರುತ್ತೇವೆ

ಆ ರೂಪದೊಂದಿಗೆ ಎಷ್ಟೋ ಕೆಲಸಗಳನ್ನು ಮಾಡುತ್ತೇವೆ ಅಂದರೆ ಕೇಳುತ್ತಿದ್ದೇವೆ, ಮಾತನಾಡುತ್ತಿದ್ದೇವೆ ಕೆಲಸಗಳನ್ನು ಮಾಡುತ್ತಿದ್ದೇವೆ, ಕಲಿಯುತ್ತಿದ್ದೇವೆ ಅನುಭವಗಳನ್ನು ಹೊಂದುತ್ತಿದ್ದೇವೆ. ಎಷ್ಟು ಮಾಡುತ್ತಿದ್ದೇವೆ ಕೊನೆಗೆ ಏನು ಮಾಡುತ್ತಿದ್ದೇವೆ ಅಂದರೆ ಆತ್ಮವಾದ ನಾವು ಧರಿಸಿರುವಂತಹ ಈ ರೂಪವನ್ನು ಅಂದರೆ ಶರೀರವನ್ನು ಇಲ್ಲೇ ಬಿಟ್ಟು ಹೊರಟು ಹೋಗುತ್ತೇವೆ.

ಆದ್ದರಿಂದ ಈ ದೇಹ ನಾನಲ್ಲ. ನನಗೆ ಪರಮಾತ್ಮ ಕೊಟ್ಟಿರುವಂತಹ ಉಪಕರಣ ಮಾತ್ರವೇ ಎಂದುಕೊಂಡರೆ,ನಿನಗೆ ಈ ಜೀವನದಲ್ಲಿ ಎಷ್ಟೋ ಸಮಸ್ಯೆಗಳು ಪರಿಷ್ಕಾರವಾಗುತ್ತದೆ.

ಅದಕ್ಕೆ ರಮಣ ಮಹರ್ಷಿ "ಅದೇ ತಿಳಿದುಕೋ" ಎನ್ನುತ್ತಾರೆ. ಪತ್ರೀಜಿ ಕೂಡ ಅದೇ ಹೇಳುತ್ತಾರೆ. **"ನೀನು ರೂಪವಾಗಿ ಬರುವ ಮೊದಲು ನೀನು ಇದ್ದೆ. ಈ ರೂಪದಲ್ಲಿ ಇದ್ದೀಯ ರೂಪ ಬಿಟ್ಟ ನಂತರವೂ ನೀನು ಇರುತ್ತೀಯಾ"**.

ಆದ್ದರಿಂದ ನೆನಪಿರಲಿ. ಎಲ್ಲಿಯಾದರೂ ಸರಿಯೇ 'ನಾನು' ಇಲ್ಲದಿದ್ದರೆ ಅಸಲು ರೂಪವೇ ಇರುವುದಿಲ್ಲ. ಆಲೋಚಿಸಿ! ರೂಪ ಎಂದರೆ ದೇಹ. ದೇಹ ಹೇಗೆ ಬಂದಿದೆ ನಿನಗಾಗಿ ಅಂದರೆ ಆತ್ಮಕ್ಕಾಗಿ ಬಂದಿದೆ. ನೀನೇ ಇಲ್ಲದಿದ್ದರೆ ರೂಪ ಎಲ್ಲಿರುತ್ತದೆ? ಈ ರೂಪ ಎಂದರೆ ದೇಹ.. ಆ ಸೃಷ್ಟಿ ಕರ್ತ ಕೊಟ್ಟಿರುವಂತಹ ಅದ್ಭುತ ವರ ಎಷ್ಟು ಅದ್ಭುತವಾದ ದೇಹವನ್ನು ಕೊಡಲಾಗಿದೆ ನೋಡಿ ಇದರ ನಿರ್ಮಾಣ, ಮಾಡಲಾಗುವ ಕೆಲಸಗಳು, ನೋಡಿದರೆ ನಿಜವಾಗಿ ಈ ದೇಹ ಎಷ್ಟು ಅದ್ಭುತವಾದದ್ದು. ಇದರೊಂದಿಗೆ ಎಷ್ಟೋ ಜನರು ಎಷ್ಟು ಅದ್ಭುತಗಳು ಮಾಡುತ್ತಾರೆ. 700 ಕೋಟಿ ಜನಸಂಖ್ಯೆ ಇರುವ ಈ ಪ್ರಪಂಚದಲ್ಲಿ ಒಬ್ಬೊಬ್ಬರು ಒಂದೊಂದು ನೈಪುಣ್ಯತೆಯನ್ನು ಪ್ರದರ್ಶಿಸುತ್ತಾರೆ. ಎಷ್ಟೊ ಆವಿಷ್ಕಾರಗಳನ್ನು ಮಾಡುತ್ತಾರೆ ಎಷ್ಟೊ ಪರಿಕಾರ, ವಸ್ತುಗಳನ್ನು ತಯಾರು ಮಾಡುತ್ತಿದ್ದಾರೆ. ಎಷ್ಟೋ ಕಂಡುಹಿಡಿದಿದ್ದಾರೆ ಎಷ್ಟೋ ರೀಸರ್ಚ್ಗಳನ್ನು ಮಾಡುತ್ತಿದ್ದಾರೆ.

ಒಬ್ಬೊಬ್ಬರು ಮಾಡುವ ಅದ್ಭುತಗಳನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ಇಷ್ಟು ಅದ್ಭುತಗಳು ಮಾಡುವಂತಹ ಈ ರೂಪವನ್ನು ಆ ಪರಮಾತ್ಮ ನೀಡಿದ್ದಾನೆ..ಆ ಪರಮಾತ್ಮ ತಯಾರು ಮಾಡಿದ್ದಾನೆ ಆಲೋಚಿಸಿದರೆ,ಈ ರೂಪದೊಂದಿಗೆ ಎಷ್ಟೋ ಅನುಭವಿಸುತ್ತಿದ್ದೇವೆ. ಆನಂದ ಅನುಭವಿಸುತ್ತಿದ್ದೇವೆ.ಪ್ರತಿಯೊಬ್ಬರು ಎಷ್ಟು ವಿಧವಾದ

ರುಚಿಗಳನ್ನು, ಸುವಾಸನೆಗಳನ್ನು ಆಸ್ವಾದಿಸುತ್ತಿದ್ದೇವೆ. ತೆಗೆದುಕೊಳ್ಳುತ್ತಿದ್ದೇವೆ. ಎಷ್ಟು ಸುಂದರ ದೃಶ್ಯಗಳನ್ನು ನೋಡುತ್ತಿದ್ದೇವೆ ಎಂದರೆ ನಿಜವಾಗಿಯೂ ಇದು ದೇವರು ನೀಡಿರುವಂತಹ ಅದ್ಭುತವಾದ ವರವೇ ಅಲ್ಲವೇ..? ಆದ್ದರಿಂದ ಈ ದೇಹಕ್ಕೆ ಏನು ಬೇಕು ಅಷ್ಟು ಆತ ನೀಡಿದ್ದಾನೆ ಈ ದೇಹದೊಳಗೆ ಎಷ್ಟು ಹೊಂದಿಸಲಾಗಿದೆ ಈ ತಲೆಯಲ್ಲಿ ಎಷ್ಟೋ ಹೊಂದಿಸಲಾಗಿದೆ. ಈ ಶರೀರದಲ್ಲಿ ಎಷ್ಟೋ ಇದೆ ಆಲೋಚಿಸಿ ಇಷ್ಟು ಅದ್ಭುತಗಳು ಮಾಡಬಲ್ಲ ಈ ದೇಹವನ್ನು ತಯಾರು ಮಾಡಿದ ಆ ಪರಮಾತ್ಮ ಎಷ್ಟು ದೊಡ್ಡವನು ನಾವು ಊಹಿಸಲು ಸಾಧ್ಯವೇ?

ಆದ್ದರಿಂದ ದೇಹ ಎನ್ನುವುದು ಮಾನವನಿಗೆ ಕೊಡಲ್ಪಟ್ಟ ಒಂದು ಅದ್ಭುತ ವರ ಆತ ಹೇಗೆ ತಯಾರು ಮಾಡಿದ, ಆತನ ಮೇಧಸ್ಸು ಎಷ್ಟು ದೊಡ್ಡದು ಎನ್ನುವುದನ್ನು ಆಲೋಚಿಸಿ. ಹೀಗೆ ತಯಾರು ಮಾಡಿದ ಇಷ್ಟು ಅದ್ಭುತವಾದ ದೇಹದ ಸಮಯ ಮುಗಿದು ಹೋದರೆ,ಮತ್ತೆ ಆತನೇ ನಾಶ ಮಾಡುತ್ತಾನೆ ಎಷ್ಟು ವಿಚಿತ್ರ ನೋಡಿ ಅದ್ಭುತವಾದ ಶರೀರ ತಾಯಿ ಗರ್ಭದಲ್ಲಿ ತಯಾರು ಮಾಡಲ್ಪಟ್ಟಿದೆ. ಈ ಶರೀರ ಭೂಮಿಗೆ ಬಂದ ಮೇಲೆ ಎಷ್ಟೋ ಕೆಲಸಗಳು ಮಾಡಿದ ಮೇಲೆ ಎನ್ನೆಷ್ಟು ಸಾಧಿಸಿದ ಮೇಲೆ ಸಮಯ ಆದ ನಂತರ ಮತ್ತೆ ನಿಷ್ಕ್ರಮಿಸುತ್ತದೆ.

ಆದ್ದರಿಂದ ಈ ದೇಹದಲ್ಲಿ ನಾವು ಇರುವಾಗಲೇ ದೇಹವನ್ನು ಜಾಗ್ರತೆಯಾಗಿ ನೋಡಿಕೊಳ್ಳುತ್ತಾ, ಈ ದೇಹದೊಂದಿಗೆ ನಾವು ಮಾಡಬೇಕಾದವನ್ನು ಮಾಡಬೇಕು. ನಾವು ಸಾಧಿಸಬೇಕಾಗಿರುವುದನ್ನು ಸಾಧಿಸಬೇಕು. ಇಷ್ಟ ಬಂದಂತೆ ಮಾಡಲು ನಮಗೆ ಅಧಿಕಾರವಿಲ್ಲ, ನೆನಪಿನಲ್ಲಿಟ್ಟುಕೊಳ್ಳಿ ನನ್ನ ಇಷ್ಟ ಎಂದರೆ ಆಗುವುದಿಲ್ಲ. ಅಷ್ಟೇ ಅಲ್ಲ ನಾನೇ ಎಲ್ಲಾ ಮಾಡುತ್ತಿದ್ದೇನೆ ಎಂದುಕೊಳ್ಳುತ್ತಿರುವೆ

ನಾನು ಆ ಕೆಲಸ ಮಾಡಿದ್ದೇನೆ. ಇದು ನೋಡಿದ್ದೇನೆ,ನಾನು ಇದು ಕೇಳಿದ್ದೇನೆ ನಾನು ಇದು ಮಾತನಾಡುತ್ತಿದ್ದೇನೆ, ನಾನು ಇದು ಕಂಡುಹಿಡಿದಿದ್ದೇನೆ ಎಂದು ಹೇಳುವೆ, ಆದರೆ ಎಲ್ಲಾ ಮಾಡಲು ಕಾರಣ ಶರೀರದಲ್ಲಿರುವ ಆತ್ಮ. ಇಲ್ಲದಿದ್ದರೆ ಏನು ಮಾಡಲಾರೆವು ಅಲ್ಲವೇ!

ಈ ದೇಹದಲ್ಲಿ ಎಷ್ಟು ಭಾಗಗಳಿವೆಯೋ ನಿನಗೆ ತಿಳಿದಿದೆಯೇ? ಹೊರಗಡೆ ಕಾಣಿಸುವುದಕ್ಕಿಂತ ಒಳಗಡೆ ಕಾಣಿಸಿದೇ ಇರುವುದು ಎಷ್ಟೋ ಇವೆ. ನೋಡಿ ಜ್ಞಾನೇಂದ್ರಿಯಗಳು, ಕರ್ಮೇಂದ್ರೀಯಗಳು,ಶರೀರ ಇವೆಲ್ಲವೂ ಹೊರಗೆ ಕಾಣಿಸುತ್ತದೆ. ಅದೂ ಅಲ್ಲದೆ ಒಳಗಡೆ ಎಷ್ಟೋ ಕ್ರಿಯೆಗಳು ನಡೆಯುತ್ತಿವೆ ಶ್ವಾಸ ಕ್ರಿಯೆ, ಜೀರ್ಣಕ್ರಿಯೆ ವಿಸರ್ಜನಾ ಕ್ರಿಯೆ,ರಕ್ತ ಪ್ರಸರಣ ಕ್ರಿಯೆ, ಹೀಗೆ 200 ಕ್ರಿಯೆಗಳು ಜರುಗುತ್ತಿವೆ. ಒಳಗಡೆ

ಹೃದಯ, ಪಿತ್ತಕೋಶ, ಪ್ಯಾಂಕ್ರಿಯಾಸ್, ಕಿಡ್ನಿಗಳಂತವು ಎಷ್ಟೋ ಭಾಗಗಳು ಇವೆ. ಇವೆಲ್ಲ ಆತ್ಮದಿಂದಲೇ ಕೆಲಸ ಮಾಡುತ್ತವೆ.

ಇಲ್ಲಿ ನೀನು ಎನ್ನುವುದು ಯಾವುದು ಇಲ್ಲ. ಆತ್ಮ ಇದ್ದರೆನೇ ಎಲ್ಲಾ ಕೆಲಸ ಮಾಡುತ್ತದೆ.ಆತ್ಮ ಇಲ್ಲದಿದ್ದರೆ ಏನು ಕೆಲಸ ಮಾಡುವುದಿಲ್ಲ. ಇದು ಅರ್ಥಮಾಡಿಕೊಳ್ಳಬೇಕು ಆದ್ದರಿಂದ ಈ ದೇಹ ಎನ್ನುವುದು ಆತ್ಮವಾಗಿರುವ ನಿನಗೆ ಒಂದು ಉಪಕರಣ ಮಾತ್ರವೇ!

ಆದ್ದರಿಂದ ಮೊದಲು ನಾನು ಯಾರು ತಿಳಿದುಕೊಂಡರೆ, ದೇಹ ಯಾರು ಎಂದು ನಿನಗೆ ಅರ್ಥವಾಗುತ್ತದೆ. ಆದ್ದರಿಂದ ಪ್ರತಿಯೊಬ್ಬರೂ ಮೊದಲು ನಾನು ಯಾರು ಎನ್ನುವ ಪ್ರಶ್ನೆ ಹಾಕಿಕೊಳ್ಳಬೇಕು. ಆ ಪ್ರಶ್ನೆ ಹಾಕಿಕೊಳ್ಳದೆ ಸುಮ್ಮನೆ ಜೀವಿಸಿದರೆ ಏನು ಪ್ರಯೋಜನವಿಲ್ಲ. 'ನಾನು ಯಾರು' ಅಂದರೆ 'ನಾನು ಆತ್ಮ' ಎನ್ನುವುದು ನಮಗೆ ತಿಳಿಯುತ್ತದೆ. ಹೇಗೆ ತಿಳಿಯುತ್ತದೆ ಅಂದರೆ ಭಗವದ್ಗೀತೆಯನ್ನು ಓದಿದರೆ ತಿಳಿಯುತ್ತದೆ.

**ಜಾತಸ್ಯ ಹಿ ದೃವೋ ಮೃತ್ಯು ರ್ದ್ರುವಂ ಜನ್ಮ ಮೃತಸ್ಯ ಚ ।**

**ತಸ್ಮಾ ದಪರಿಹಾರ್ರ್ಥೇ ನ ತ್ವಮ್ ಶೋಚಿತುಮರ್ಹಸಿ॥ (ಭ. ಗೀ.2–27)**

ತಾ॥ ಯಾವ ವಿಧವಾಗಿ ನೋಡಿದರೂ ಜನನಿಸಿದವನಿಗೆ ಸಾವು ತಪ್ಪುವುದಿಲ್ಲ ಮರಣಿಸಿದವನಿಗೆ ಜನನ ತಪ್ಪದು ಅನಿವಾರ್ಯವಾಗಿ ಈ ವಿಷಯದ ಕುರಿತು ಶೋಕಿಸಲು ತಕ್ಕದಲ್ಲ. ಆದ್ದರಿಂದ ಹುಟ್ಟಿದವನು ಸಾಯಲೇ ಬೇಕು.

ಇದನ್ನು ಈ ಕೃಷ್ಣನು ಸ್ಪಷ್ಟವಾಗಿ ಹೇಳಿದ್ದಾನೆ. ಸತ್ತವನು ಜನಿಸಲೇಬೇಕು ಹಾಗೆ ಇಲ್ಲಿ ನೋಡಿದರೆ ಶರೀರ ಉರಿದು ಬೂದಿಯಾಗಿದೆ... ಬೂದಿಯಾದ ಮೇಲೆ ಇನ್ನು ಇಲ್ಲದಂತೆಯೇ,! ಬೂದಿಯಾದ ಶರೀರ ನೀನೇ ಆದರೆ ಮತ್ತೆ ಹೇಗೆ ಬರುವೆ? ಆದ್ದರಿಂದ ಇರುವುದು ಆತ್ಮವಾದ್ದರಿಂದ ನೀನು ಆತ್ಮ ಎಂದು ಅರ್ಥ ಆಗುತ್ತದೆ.

ಆತ್ಮ ನೀನೆ ಆದ್ದರಿಂದ, ಶರೀರವನ್ನು ಸುಟ್ಟರೂ ಮತ್ತೆ ನೀನು ಹೊಸ ಶರೀರ ತೆಗೆದುಕೊಳ್ಳುವೆ. ಅಂದರೆ ಈ ಶ್ಲೋಕದ ಅನುಸಾರ ನೀನು ಆತ್ಮ ಎಂದು ಅರ್ಥವಾಗುತ್ತದೆ.

ಹಾಗೆಯೇ,ಎರಡನೆಯ ಅಧ್ಯಾಯದಲ್ಲಿ 22ನೇ ಶ್ಲೋಕ

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣೋತಿ ನರೋಪರಾಣಿ।**
**ತಥಾ ಶರೀರಾಣಿ ವಿಹಾಯ ಜೀರ್ಣಾ ನನ್ಯಾನಿ ಸಂಯಾತಿ ನವಾನಿ ದೇಹಿ॥**
**(ಭ. ಗೀ.2–22)**

ತಾ ॥ ಹರಿದು ಹೋದ ಹಳೆಯ ಬಟ್ಟೆಗಳು ತ್ಯಜಿಸಿ ಮಾನವ ಹೊಸ ಬಟ್ಟೆಗಳನ್ನು ಹೇಗೆ ಧರಿಸುವನೋ,ಹಾಗೆಯೇ ಮುದಿಯಾದ ಹಳೆಯ ಶರೀರವನ್ನು ಬಿಟ್ಟು, ಹೊಸ ಶರೀರವನ್ನು ಧರಿಸುತ್ತಿರುವೆ. ಈ ಶ್ಲೋಕದ ಅನುಸಾರ ನೋಡಿದರೂ ನೀನು ಆತ್ಮ ಎಂಬುದು ಅರ್ಥವಾಗುತ್ತದೆ ಹಾಗೆ ಇನ್ನೊಂದು ಶ್ಲೋಕ

**"ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವ್ವನಂ ಜರಾ ।**

**ತಥಾ ದೇಹಾಂತರ ಪ್ರಾಪ್ತಿ ರ್ಧೀರ ಸ್ತತ್ರನ ಮುಹ್ಯತಿ "॥ (ಭ. ಗೀ.2-13)**

ಅಂದರೆ ಮಾನವನ ಶರೀರಕ್ಕೆ ಬಾಲ್ಯ, ಯೌವ್ವನ ಮುದಿತನ ಅವಸ್ಥೆಗಳು ಹೇಗೆ ಅನಿವಾರ್ಯವಾಗಿ ಉಂಟಾಗುವುದು ಆ ವಿಧವಾಗಿಯೇ ಮರಣದ ನಂತರ ಮತ್ತೊಂದು ಶರೀರ ಹೊಂದುವುದು ಸಹಾ ನಡೆಯುತ್ತದೆ.

ಹಾಗಾದರೆ ಇನ್ನೊಂದು ಶರೀರ ಬರುವಾಗ ಏಕೆ ಅಳುವೆ? ನೀನು ಏನಾದರೂ ಶಾಶ್ವತವಾಗಿ ಬಂದಿರುವೆಯಾ? ಈ ಮಧ್ಯೆ ಶರೀರ ತಂದುಕೊಂಡಿರುವೆ ಈ ಶರೀರದಲ್ಲಿ ನೀನೇನೋ ಯುಗ ಯುಗಗಳಿಂದ ಇರುವಂತೆ,ಹೋಗುತ್ತಿದ್ದೇನೆ ಎಂದು ಬಾಧೆಪಡುವೆ, ಹೋದರೆ ಹೋಗಲಿ ಹೋದರೆ ತಾನೇ ಮತ್ತೆ ಇನ್ನೊಂದು ಬರಲು ಸಾಧ್ಯ. ಈ ವಿಷಯದಲ್ಲಿ ಜ್ಞಾನಿಯಾದವನು ಕಿಂಚಿತ್ ಮೋಹವನ್ನು ಹೊಂದಿರುವುದಿಲ್ಲ, ಎಂದು ಶ್ರೀ ಕೃಷ್ಣ ಹೇಳಿದ್ದಾರೆ.

ಮೇಲಿನ ವಾಕ್ಯಗಳ ಅನುಸಾರ ನಾನು ಆತ್ಮ ಎಂದು ಸ್ಪಷ್ಟವಾಗಿ ತಿಳಿಯುತ್ತದೆ. ಹಾಗಾದರೇ, ಆತ್ಮವಾಗಿದ್ದು ಕೂಡಾ ದೇಹ ಭಾವನೆಯಿಂದ ಏಕೆ ಇರುವೆ? ಏಕೆ ನಾನು ದೇಹ ಎನ್ನುವಂತೆ ಜೀವಿಸುತ್ತಿರುವೆ? ದೇಹಕ್ಕೆ ಏಕೆ ಪ್ರಾಮುಖ್ಯತೆ ನೀಡುತ್ತಿರುವೆ? ನಿನಗೆ ಕೊಡಲಾಗಿರುವ ಸಮಯ, ನಿನ್ನ ಶರೀರಕ್ಕೆ ಕೊಡಲಾಗಿರುವ ಶಕ್ತಿಗಳು, ಈ ಜೀವನ ಎಲ್ಲವೂ ಶರೀರಕ್ಕೆ ಏಕೆ ವಿನಿಯೋಗಿಸುತ್ತಿರುವೆ? ಏಕೆಂದರೆ ಶರೀರವೇ ನಾನು ಎಂದು ಎಂದುಕೊಳ್ಳುತ್ತಿರುವೆ...

ಯಾವಾಗಲೂ ಶರೀರಕ್ಕಾಗಿ ಶಾರೀರಿಕ ಸುಖಕ್ಕಾಗಿ ಆರೋಗ್ಯ, ಅಂದಕ್ಕಾಗಿ ಶರೀರ ಸೌಷ್ಟವಕ್ಕಾಗಿ, ಶರೀರವೇ ತಾನಾಗಿ ಜೀವಿಸುತ್ತಿರುವುದರಿಂದಲೇ ಪ್ರಾಮುಖ್ಯತೆ ಕೊಡುತ್ತಿರುವೆ.

ಇದಕ್ಕೆ ಮುಖ್ಯ ಕಾರಣ, ಮಾಯೆ ಎಂದು ಹೇಳಬಹುದು. ಆದ್ದರಿಂದ ಮಾಯೆ ಎಂದರೇನು? ಆ ಮಾಯೆಯಿಂದ ಹೇಗೆ ಹೊರ ಬರಬೇಕು? ಎನ್ನುವುದನ್ನು ತಿಳಿದುಕೊಳ್ಳಬೇಕು. ಈ ಮಾಯೆಯ ಕುರಿತು ಪತ್ರಿಜೀಯವರು ಅದ್ಭುತವಾಗಿ ವಿವರಣೆ ನೀಡಿದ್ದಾರೆ. ಅದನ್ನು ನಾವು ತಿಳಿದುಕೊಳ್ಳೋಣ.

"ಯಾಮಾ ಸಾ ಮಾಯಾ" ಎಂದಿದ್ದಾರೆ.

'ಯಾ' ಎಂದರೆ ಯಾವುದು,'ಮಾ' ಅಂದರೆ ಯಾವುದು ಇಲ್ಲವೋ, 'ಸಾ' ಎಂದರೆ ಅದನ್ನು ಮಾಯೆ ಎನ್ನುತ್ತಾರೆ. ಅಂದರೆ ಯಾವುದು ಇಲ್ಲವೋ, ಯಾವುದಕ್ಕಾದರೆ ಆಸ್ತಿಕತೆ ಇಲ್ಲವೋ ಅದಕ್ಕೆ ಮಾಯೆ ಎನ್ನುತ್ತಾರೆ. ಇಲ್ಲದಿರುವುದನ್ನು ಇದೆ ಎಂದುಕೊಳ್ಳುವುದೇ ಮಾಯೆ.

ಪತ್ರಿಜೀ ಯವರು ಏನು ಹೇಳಿದ್ದಾರೆ ಎಂದರೆ, ಎರಡು ಮಾಯೆಗಳಿವೆ ಅವುಗಳಲ್ಲಿ ಮೊದಲನೆಯದು ಸಾವು ಎನ್ನುವ ಭಾವನೆ ಅಂದರೆ ನಾನು ಸಾಯುತ್ತೇನೇನೋ ಎನ್ನುವ ಭಾವನೆ.

ಎರಡನೆಯದು, ನಾನು ಬೇರೆ ನೀನು ಬೇರೆ ಎನ್ನುವ ಭಾವನೆ. ಹೀಗೆ ಪ್ರತಿಯೊಬ್ಬರೂ ಅಂದುಕೊಳ್ಳುತ್ತಾರೆ. ನಾನು ಬೇರೆ, ಅವನು ಬೇರೆ, ಅವನು ಬೇರೆ ಕುಲ, ಬೇರೆ ಮತ ಎಂದುಕೊಳ್ಳುವ ಭಾವನೆಯು ಮಾಯೆಯೇ. ಇದರಿಂದ ಹೊರಬರಬೇಕೆಂದರೆ, ಸಾವು ಎನ್ನುವುದು ಎಲ್ಲಿಯೂ ಇಲ್ಲದ ವಿಷಯ ಎಂದು ತಿಳಿದುಕೊಳ್ಳಬೇಕು. ಇರುವುದೆಲ್ಲ ಕೊನೆಯಿಲ್ಲದ ರೂಪಾಂತರೀಕರಣ, ಪರಿಣಾಮಕ್ರಮ ಅಂದ್ರೆ ಬದಲಾಗುತ್ತಾ ಇರುತ್ತದೆ ಎಂದು ತಿಳಿದುಕೊಳ್ಳಬೇಕು.

ಇದಕ್ಕೆ ಅಂತ್ಯ ಇರುವುದಿಲ್ಲ, ಬದಲಾಗುತ್ತಾ ಇರುತ್ತದೆ. ಹಾಗೇ ಪರಿಣಾಮ ಕ್ರಮದಲ್ಲಿ ಬದಲಾವಣೆ ಹೊಂದುತ್ತಾ ಇರುತ್ತದೆ. ಆದ್ದರಿಂದ ಎಲ್ಲಿಯೂ ಸಾವು ಇಲ್ಲ ಎಂದು ತಿಳಿದುಕೊಂಡವನೇ ಮಾಯೆಯಿಂದ ಹೊರಬಂದವನು.

ಹಾಗಾದರೆ ಇದು ಹೇಗೆ ತಿಳಿಯುತ್ತದೆ ಎಂದರೆ "ಮರಣಿಸುವ ಮೊದಲೇ ಮರಣಿಸಿದವನಿಗೆ" ತಿಳಿಯುತ್ತದೆ. ಹಾಗೆಯೇ "ಅಹಂ ಬ್ರಹ್ಮಾಸ್ಮಿ –ನಾನೇ ಬ್ರಹ್ಮ" ನು

"ತತ್ವಮಸಿ –ನೀನು ಅದೇ".....ಅಂದರೆ "ನಾನು ಅದೇ–ನೀನು ಅದೇ " ಎಂದು ತಿಳಿದುಕೊಳ್ಳಬೇಕು.

"ಮಮಾತ್ಮಾ ಸರ್ವ ಭೂತಾತ್ಮ" ಎಂದು ತಿಳಿದುಕೊಂಡವನೇ ಮಾಯೆಯಿಂದ ಹೊರಬಂದವನು. ಅಷ್ಟೇ ಅಲ್ಲ ಯಾರು ದೇಹ ಭ್ರಾಂತಿಯಲ್ಲಿ ಇರುತ್ತಾರೋ! ಅವರು ಮಾಯೆಯಲ್ಲಿ ಸಿಲುಕಿಕೊಂಡವರು. "ನಾನು ಆತ್ಮ ದೇಹವಲ್ಲ" ಎನ್ನುವ ಜ್ಞಾನವಿರುವವನೇ ಮಾಯೆಯಲ್ಲಿ ಇರದವನು. ಈ 'ಸ್ಥಿತಿ' ಅಂದರೆ ಈ 'ಬ್ರಾಂತಿ' ಧ್ಯಾನದ ಮೂಲಕ ತೊಲಗುತ್ತದೆ. ಧ್ಯಾನದ ಮೂಲಕವೇ "ಮಾಮಾತ್ಮ ಸರ್ವ ಭೂತಾತ್ಮ" ಎಂದು ತಿಳಿದುಕೊಳ್ಳುತ್ತೇವೆ, ಮಾಯೆಯಿಂದ ಹೊರ ಬರುತ್ತೇವೆ.

ಆದ್ದರಿಂದ ನೆನಪಿರಲಿ ಜೀವನು ಮಾಯೆಯಲ್ಲಿ ಹುಟ್ಟಿ,ಮಾಯಾ ಜಗತ್ತಿನಲ್ಲಿ ಜೀವಿಸುತ್ತಾ, ಮರ್ಮವನ್ನು ತಿಳಿದುಕೊಳ್ಳಲಾರದೆ ದೇಹವನ್ನು ಬಿಡುತ್ತಿದ್ದಾನೆ.

'ಜೀವಾತ್ಮ' ಎಂದರೆ ಶರೀರ ತೆಗೆದುಕೊಂಡ ಆತ್ಮ. ಮಾಯಾ ಜಗತ್ತು ಎಂದರೆ,ಯಾವುದು ಇರುವುದಿಲ್ಲದಿರುವುದು, ಆದರೆ ಎಲ್ಲಾ ಇರುವಂತೆಯೇ ಇರುತ್ತದೆ. ನೆನಪಿರಲಿ ಪತ್ರೀಜಿಯವರು ಏನು ಹೇಳಿದ್ದಾರೆಂದರೆ, ಯಾರು ತಮೋಗುಣ, ರಜೋಗುಣ, ಸಾತ್ವಿಕ ಗುಣಗಳಲ್ಲಿ ಇರುತ್ತಾರೋ ಅವರು ಮಾಯೆಯಲ್ಲಿಯೇ ಇರುತ್ತಾರೆ. ಈ ಮಾಯೆಯಿಂದ ಹೊರ ಬರಬೇಕೆಂದರೆ ಈ ಮೂರು ಗುಣಗಳು ದಾಟಬೇಕು.

ಅದಕ್ಕೇ ನಾನು ಯಾವಾಗಲೂ ಹೇಳುವುದು ಸಾತ್ವಿಕ ಗುಣವನ್ನೂ ಕೂಡ ದಾಟಿ ಹೋಗಬೇಕು.. ಮೊದಲು ಸಾತ್ವಿಕ ಗುಣಕ್ಕೆ ಬರಲು ಹೇಳುತ್ತೇನೆ.ನಂತರ ಅದನ್ನು ಕೂಡಾ ದಾಟಿ ಹೋಗಬೇಕು, ಎಂದು ಹೇಳುತ್ತೇನೆ. ಶುದ್ಧ ಸಾತ್ವಿಕಗುಣಕ್ಕೆ ನಾವು ಸೇರಿ ನಿರ್ಗುಣಕ್ಕೆ ಹೋಗಲು ಆದರೆ ಆಗ ನಾವು ಮಾಯೆಯಿಂದ ಹೊರ ಬರುತ್ತೇವೆ.

ಯಾವಾಗ ನಾವು "ಶ್ವಾಸದ ಮೇಲೆ ಗಮನ"ದ ಮೂಲಕ ನಿರ್ಗುಣಕ್ಕೆ ಸೇರಿಕೊಳ್ಳುವೆವೋ ಆಗ ನಾವು ಮಾಯೆಯಿಂದ ಹೊರ ಬರುತ್ತೇವೆ. "ಮಾಯೆಯು ನಮ್ಮನ್ನು ಬಂಧಿಸುತ್ತದೆ, ಜ್ಞಾನ ಆ ಬಂಧನದಿಂದ ಬಿಡಿಸುತ್ತದೆ. ಅದಕ್ಕೆ ಪತ್ರೀಜಿಯವರು ಜ್ಞಾನವನ್ನು ಸಂಪಾದಿಸಿಕೊಳ್ಳಿ ಧ್ಯಾನ ಮಾಡಿ "ಧ್ಯಾನದಿಂದಲೇ ಜ್ಞಾನ" ಎಂದು ಹೇಳುತ್ತಾರೆ.

ಆದ್ದರಿಂದ ಧ್ಯಾನ ಎನ್ನುವುದು ಅನುಭವಗಳು ಬರಲು, ರೋಗಗಳು ಹೋಗಲು ಅಲ್ಲವೆಂದು ...ಜ್ಞಾನ ಸಂಪಾದಿಸಿಕೊಳ್ಳಲು ಎಂದು ತಿಳಿದುಕೊಳ್ಳಬೇಕು. ಹಾಗೆ ತಿಳಿದುಕೊಳ್ಳಬೇಕೆಂದರೆ, ಧ್ಯಾನ ಮಾರ್ಗ ಅಂದರೆ ಶ್ವಾಸದ ಮೇಲೆ ಗಮನದ ಹೊರತು ಇನ್ನು ಯಾವ ಮಾರ್ಗದ ಮೂಲಕವೂ ಜ್ಞಾನವನ್ನು ಹೊಂದಲಾರೆವು. ತಿಳಿದುಕೊಳ್ಳಿ ಈ ಆತ್ಮ ಜ್ಞಾನ ಹೊಂದುವುದರಿಂದಲೇ ಆತ್ಮಾನಂದ ಇಲ್ಲದಿದ್ದರೆ ಕೊನೆಗೆ ಉಳಿಯುವುದು ಕಷ್ಟಗಳು ಕಣ್ಣೀರುಗಳೇ..

ನಾನು ಕೆಲವು ಜೂಮ್ ಕ್ಲಾಸ್ ಗಳಲ್ಲಿ ನೋಡಿದ್ದೇನೆ, ಕೊನೆಯಲ್ಲಿ ಅನುಭವಗಳು ಹೇಳಿ ಎಂದರೆ ಎಲ್ಲರೂ ಕಷ್ಟಗಳು ರೋಗಗಳು ಹೇಳುವವರೇ! ಆದರೆ ಜ್ಞಾನದ ಕುರಿತು ಮಾತನಾಡುವವರು ಒಬ್ಬರು ಕಾಣಿಸುವುದಿಲ್ಲ. ಆಲೋಚಿಸಿ ಇಂತಹ ದೊಡ್ಡ ಧ್ಯಾನ ಮಾರ್ಗಕ್ಕೆ ಬಂದ ಮೇಲೆ ಇನ್ನೂ ಕಷ್ಟಗಳ ಕುರಿತು ಹೇಳಬೇಕೇ?ಎಷ್ಟು ಅಜ್ಞಾನದಲ್ಲಿ ಇದ್ದಾರೆ ಅಲ್ಲವೇ!!

ನಾನು ದೇಹ ಅಂದುಕೊಳ್ಳುವುದರಿಂದಲೇ ಅಲ್ಲವೇ... ಮಾಯೆಯಲ್ಲಿ ಇರುವುದರಿಂದ ಅಲ್ಲವೇ ನಿಮಗೆ ಈ ಕಷ್ಟಗಳು ಆದ್ದರಿಂದ ಈ ಜ್ಞಾನ ಇಲ್ಲದಿದ್ದರೆ ಕಷ್ಟಗಳ ಕಣ್ಣೀರುಗಳೇ ಇರುತ್ತದೆ. ಎಷ್ಟು ವಿಧವಾದ ಧ್ಯಾನಗಳು ಮಾಡಿದರು ಸಮಸ್ಯೆಗಳೇ...ಒಂದು ಸಮಸ್ಯೆ ಹೋದ ಮೇಲೆ ಮತ್ತೊಂದು ಬರುತ್ತದೆ. ಒಂದು ರೋಗ ಹೋದ ಮೇಲೆ ಇನ್ನೊಂದು ಬರುತ್ತದೆ. ಒಂದು ಕಷ್ಟ ಹೋದರೂ ಇನ್ನೊಂದು ಬರುತ್ತದೆ.ಜೀವನವೆಲ್ಲ ಮುಗಿದು ಹೋಗುತ್ತದೆ ಆದರೆ ಕಷ್ಟಗಳು ಹೋಗುವುದಿಲ್ಲ. ಆದ್ದರಿಂದ ನೆನಪಿಟ್ಟುಕೊಳ್ಳಿ ಜ್ಞಾನ ಸಂಪಾದಿಸಿಕೊಳ್ಳಲೇಬೇಕು! ನಾನು ಯಾರು ತಿಳಿದುಕೊಳ್ಳಲೇಬೇಕು!

ಅದಕ್ಕೆ ಪತ್ರೀಜಿಯವರು ಹೇಳಿದ ಈ ನಾಲ್ಕು ಆಚರಿಸಲೇಬೇಕು.

1. "ಶ್ವಾಸದ ಮೇಲೆ ಗಮನ ಧ್ಯಾನ ಮಾಡಬೇಕು. ಅದರೊಂದಿಗೆ ಸಾತ್ವಿಕವಾದ ಶಾಖಾಹಾರ ತೆಗೆದುಕೊಳ್ಳಬೇಕು.
2. ಆತ್ಮಜ್ಞಾನಕ್ಕೆ ಸಂಬಂಧಿಸಿದ ಪುಸ್ತಕಗಳು ಓದಬೇಕು. ಮುಖ್ಯವಾಗಿ ಪತ್ರೀಜಿಯವರ ಪುಸ್ತಕಗಳು ಓದಬೇಕು.
3. ಆತ್ಮಜ್ಞಾನ ಬೋಧಿಸುವವರ ಸಾಂಗತ್ಯ ಮಾಡಬೇಕು. ಅಂದರೆ ಭೀಮವರಂ ಕ್ಲಾಸುಗಳಲ್ಲಿ ಪಾಲ್ಗೊಳ್ಳಬೇಕು.
4. ಹಾಗೆ ನಾವು ಮಾಡಬಲ್ಲ ಆತ್ಮ ಸೇವೆಗಳು ಮಾಡಬೇಕು.

ಈ ವಿಧವಾಗಿ ಮಾಡಿದರೆ, ಖಂಡಿತವಾಗಿ ಆತ್ಮಜ್ಞಾನಿಗಳು ಆಗುತ್ತಾರೆ.ನಾನು ಯಾರು ಎಂದು ತಿಳಿದುಕೊಳ್ಳುತ್ತಾರೆ. ಮರಣಿಸಿದ ನಂತರ ಉನ್ನತ ಲೋಕಗಳಿಗೆ ಸೇರಿಕೊಳ್ಳುತ್ತಾರೆ.



# ಶ್ರೀ ರಾಮಧಾಮ ಧ್ಯಾನಕೇಂದ್ರ

ನಾರಾಯಣಪ್ಪಗಾರ್ಡನ್, ವೈಟ್‌ಫೀಲ್ಡ್, ಬೆಂಗಳೂರು–560 066.
ಸಂಪರ್ಕಿಸಿ : ಹೆಚ್. ಎನ್. ಶ್ರೀನಿವಾಸ, 9449695503
ವಿಜಯಲಕ್ಷ್ಮೀ ಎಸ್.ಎನ್. 80500 82689

## ಶ್ರೀ ರಾಮ ಪಬ್ಲಿಕೇಶನ್ಸ್‌ನಲ್ಲಿ ದೊರೆಯುವ ಪುಸ್ತಕಗಳು

| | | |
|---|---|---|
| 1. | ಅಹಿಂಸೆ & ಶಾಖಾಹಾರ | ರೂ. 20 |
| 2. | ನವವಿಧ ಧರ್ಮಗಳು | ರೂ. 15 |
| 3. | ಸಸ್ಯಾಹಾರವೇ ಮಾನವಾಹಾರ | ರೂ. 20 |
| 4. | ಧ್ಯಾನ | ರೂ. 60 |
| 5. | ವಿದ್ಯಾರ್ಥಿಗಳ ವಿಕಾಸಕ್ಕೆ ಧ್ಯಾನ ವಿದ್ಯೆ | ರೂ. 30 |
| 6. | ಭಾಗವತ ಸನ್ನಿವೇಶಗಳ ಅಂತರಾರ್ಥ | ರೂ. 30 |
| 7. | ಶಿರಿಡಿ ಸಾಯಿ ಸಂದೇಶಗಳು | ರೂ. 30 |
| 8. | ಪ್ರಾಣ ಶಕ್ತಿ | ರೂ. 100 |
| 9. | ಜೀವನದ ಸೂಕ್ಷ್ಮಗಳು | ರೂ. 60 |
| 10. | ವಿದ್ಯಾರ್ಥಿ ಜೀವನ ಕ್ರಾಂತಿ | ರೂ. 40 |
| 11. | ಸಂಘಂ ಶರಣಂ ಗಚ್ಛಾಮಿ | ರೂ. 300 |
| 12. | ತುಳಸಿ ದಳ (I) | ರೂ. 200 |
| 13. | ತುಳಸಿ ದಳ (ii) | ರೂ. 220 |
| 14. | ಆಶ್ಚರ್ಯ....ಆಶ್ಚರ್ಯ | ರೂ. 40 |
| 15. | ದುಃಖ ನಿವಾರಣೆಯ ಮಾರ್ಗ | ರೂ. 70 |
| 16. | ಧ್ಯಾನದಿಂದಲೇ ಜ್ಞಾನ | ರೂ. 70 |
| 17. | ಬ್ರಹ್ಮಜ್ಞಾನ | ರೂ. 70 |
| 18. | ಜ್ಞಾನ ಜ್ಯೋತಿ | ರೂ. 90 |
| 19. | ಗೈಡಿಂಗ್ | ರೂ. 100 |
| 20. | ಸಂಕಲ್ಪವೆಂದರೇನು? | ರೂ. 50 |
| 21. | ಕರ್ಮ ಸಿದ್ಧಾಂತ | ರೂ. 70 |
| 22. | ಜ್ಞಾನ ಕುಸುಮಗಳು | ರೂ. 90 |
| 23. | ಆಲೋಚನಾ ಶಕ್ತಿ | ರೂ. 40 |
| 24. | ಆತ್ಮವಿಜ್ಞಾನ ಮತ್ತು ಮೃತ್ಯುವೇ ಇಲ್ಲ | ರೂ. 40 |
| 25. | ಆಧ್ಯಾತ್ಮಿಕ ಶಾಸ್ತ್ರ | ರೂ. 40 |
| 26. | ಭಕ್ತಿ ಮುಕ್ತಿ | ರೂ. 30 |
| 27. | ಧ್ಯಾನ ತರಂಗ | ರೂ. 40 |
| 28. | ಜ್ಞಾನ ಯುಗ | ರೂ. 60 |
| 29. | ಸೇತು ವಿಜ್ಞಾನ | ರೂ. 40 |
| 30. | ಮರಣಿಸುವ ಮುಂಚೆಯೇ ಮರಣಿಸಬೇಕು | ರೂ. 130 |
| 31. | ಅತೀಂದ್ರಿಯ ಶಕ್ತಿಗಳು | ರೂ. 40 |
| 32. | ನಾವು ಇಹಲೋಕ ವಾಸಿಗಳಾ? ಪರಲೋಕ ವಾಸಿಗಳಾ? | ರೂ. 40 |
| 33. | ಆಲೋಚಿಸಿ | ರೂ. |
| 34. | ನಿರ್ವಾಣ ಮಾರ್ಗ | ರೂ. |
| 35. | ಸತ್ಯ | ರೂ. |
| 36. | ಆರ್ಥಿಕ ಪರಿಸ್ಥಿತಿ | ರೂ. |
| 37. | ಚಕ್ರಗಳು | ರೂ. |
| 38. | ಭೂತದಯೆ ಮತ್ತು ದೈವತ್ವ | ರೂ. |

# “ಧ್ಯಾನ ಮಾಡುವ ವಿಧಾನ”

**ಯಾವುದಾದರೂ ಸುಖಾಸನದಲ್ಲಿ .. ಹಾಯಾಗಿ ಕುಳಿತುಕೊಂಡು ..
ಕೈಗಳೆರಡೂ ಸೇರಿಸಿಕೊಂಡು .. ಕಣ್ಣೆರೆಡೂ ಮುಚ್ಚಿಕೊಂಡು ..
ಪ್ರಕೃತಿ ಸಹಜವಾಗಿ ನಡೆಯುತ್ತಲಿರುವ ಉಚ್ಛ್ವಾಸ, ನಿಶ್ವಾಸಗಳನ್ನೇ ..
ಏಕಧಾರೆಯಾಗಿ .. ಗಮನಿಸುತ್ತಾ ಇರಬೇಕು!**

**ಧ್ಯಾನವನ್ನು ಯಾರಾದರೂ ಮಾಡಬಹುದು
ಯಾವ ವಯಸ್ಸಿನವರಾದರೂ ಮಾಡಬಹುದು
ಯಾವ ಸಮಯದಲ್ಲಿಯಾದರೂ ಮಾಡಬಹುದು
ಯಾವ ಸ್ಥಳದಲ್ಲಿಯಾದರೂ ಮಾಡಬಹುದು.**

ಧ್ಯಾನವನ್ನು ನಿಯಮಿತವಾಗಿ ತಪ್ಪದೇ ಮಾಡಬೇಕು....
ಅವರವರ ವಯಸ್ಸಿಗೆ ಅನುಗುಣವಾಗಿ ಪ್ರತಿಯೊಬ್ಬರೂ, ಪ್ರತಿನಿತ್ಯವೂ ಧ್ಯಾನ ಮಾಡಬೇಕು
ಉದಾಹರಣೆಗೆ, ನಿಮ್ಮ ವಯಸ್ಸು ಇಪ್ಪತ್ತು ವರ್ಷಗಳಾಗಿದ್ದರೆ, ಇಪ್ಪತ್ತು ನಿಮಿಷಗಳ ಕಾಲ ಧ್ಯಾನ ಮಾಡಬೇಕು.
ನಿಮ್ಮ ವಯಸ್ಸು ನಲವತ್ತು ವರ್ಷಗಳಾಗಿದ್ದರೆ ನಲವತ್ತು ನಿಮಿಷಗಳ ಕಾಲ
ಹೀಗೆ ವಯಸ್ಸಿಗೆ ಅನುಗುಣವಾಗಿ ಧ್ಯಾನ ಮಾಡಬೇಕು.



ಪತ್ರೀಜಿ ಏನು ಹೇಳಿದ್ದಾರೆಂದರೆ ನಿರಂತರ ಧ್ಯಾನ ಸಾಧನೆಯಿಂದ ನಾಡಿ ಮಂಡಲ ಪ್ರಕ್ಷಾಳನೆಯಾಗಿ ನಮಗೆ ಶಕ್ತಿಗಳು, ಸಿದ್ದಿಗಳು ಸಿದ್ಧಿಸುತ್ತವೆ ಮೂಲಾದಾರ, ಸ್ವಾದಿಷ್ಟಾನ, ಮಣಿಪೂರಕ, ಅನಾಹತ, ವಿಶುದ್ಧ, ಅಜ್ಞಾ ಎನ್ನುವ ಪದಗಳು ಮನುಷ್ಯನ ವಿವಿಧ ಮನೋ ಸ್ಥಾಯಿಗಳನ್ನು ಸೂಚಿಸುತ್ತವೆ. ಅಷ್ಟೇ ಹೊರತು ಅದಕ್ಕಿಂತ ಮತ್ತೇನು ಇಲ್ಲ. ಧ್ಯಾನ ಸಾಧನೆ ಮಾಡುತ್ತಾ ಆನೋಚನಾ ರಹಿತ ಸ್ಥಿತಿಗೆ ಸೇರುತ್ತಿರುವಾಗ ಅಪಾರವಾಗಿ ವಿಶ್ವಶಕ್ತಿ ಪ್ರವೇಶಿಸಿ ನಮ್ಮ ಪೂರ್ವ ಪಾಪಕರ್ಮಗಳ ಪ್ರತಿರೂಪವಾದ ಮಲಿನ ನಾಡಿ ಮಂಡಲವನ್ನು ಶುದ್ಧಿ ಮಾಡುತ್ತದೆ. ಈ ಪ್ರಕ್ಷಾಳನೆಯನ್ನು ಆಗತಾನೆ ಅಭ್ಯಾಸ ಮಾಡುತ್ತಿರುವ ಧ್ಯಾನಿಗಳು ಅದನ್ನು ಕುಂಡಲಿನಿ ಉತ್ತೇಜನ ಎನ್ನುತ್ತಾರೆ ಎಂದು ಪ್ರತ್ರೀಜಿ ಹೇಳಿದ್ದಾರೆ.

ತಟವರ್ತಿ ವೀರರಾಘವರಾವ್

ರೂ 30/-

**ಪಿರಮಿಡ್ ಸ್ಪಿರಿಚ್ಯುಯಲ್ ಸೊಸೈಟೀಸ್ ಮೂವ್‌ಮೆಂಟ್, ಇಂಡಿಯಾ**

ಧ್ಯಾನದ ಬಗ್ಗೆ ಮತ್ತಷ್ಟು ಸಮಾಚಾರಕ್ಕಾಗಿ ಈ ಕೆಳಗಿನ ವೆಬ್‌ಸೈಟ್ ಸಂದರ್ಶಿಸಿ

https: //www.youtube.com/pmckannada ● www.meditationeverywhere.org ● www.pssmovement.org

**ಶ್ರೀರಾಮ ಪಬ್ಲಿಕೇಶನ್ಸ್**

ಶ್ರೀರಾಮಧಾಮ ಧ್ಯಾನಕೇಂದ್ರ, ನಾರಾಯಣಪ್ಪ ಗಾರ್ಡನ್,
ವೈಟ್ ಫೀಲ್ಡ್, ಬೆಂಗಳೂರು - 560 066

ಸಂಪರ್ಕಿಸಿ : ಹೆಚ್.ಎನ್. ಶ್ರೀನಿವಾಸ, 9449695503
ವಿಜಯಲಕ್ಷ್ಮಿ ಎಸ್.ಎನ್. + 91 80500 82689